# ಮೋಹದ ಮಹಾಜಾಲ

ಅದ್ಭುತ ಸಾಹಸ — ಅಪರಾಧ ಶೋಧೆ

(ಸಾಮಾಜಿಕ ಕಾದಂಬರಿ)

ಬರೆದವರು:
ವೀರಪ್ಪ ಯೆಗಟಿ, ಬಿ. ಎ., ಎಲ್ಎಲ್. ಬಿ.,
ವಕೀಲ, ಹಾವೇರಿ.

ಬೆಲೆ: ರೂ. ೧·೭೫

ನವಯುಗ ಎಂಟರ್‌ಪ್ರೈಸ್ ಲಿಮಿಟೆಡ್
ನವಯುಗ ಪ್ರೆಸ್, ಉಡುಪಿ

# ಪ್ರಸ್ತಾವನೆ

ಕತೆ, ಕಾದಂಬರಿಗಳು ಓದುಗರಿಗೆ ಮನೋರಂಜಕ ವಿಷಯಗಳನ್ನು ಒದಗಿಸುವವೆಂಬದು ಸಹಜ. ಸತ್ಯಬೋಧೆ ಸದ್ವರ್ತನೆಗಳನ್ನು ತಿಳಿಸುವದು ಸಹ ಅವುಗಳ ಧ್ಯೇಯವಾಗಿರಬೇಕು. ಮನೋವಿಕಾರವನ್ನುಂಟುಮಾಡಿ ದುಷ್ಟಮಾರ್ಗಕ್ಕೆ ಪ್ರವೃತ್ತಿಮಾಡುವ ಕಾದಂಬರಿಗಳು ಜನಹಿತವನ್ನು ಮಾಡಲಾರವು. ಈ ಕಾದಂಬರಿಯಲ್ಲಿ ಸತ್ಯಾಸತ್ಯಗಳ ತಾರತಮ್ಯವೂ, ಸನ್ಮಾರ್ಗ ದುರ್ಮಾರ್ಗಗಳ ಪರಿಣಾಮಗಳೂ ಪಾತ್ರಗಳ ಪ್ರತ್ಯಕ್ಷ ವರ್ತನೆಗಳ ಮೂಲಕ ಚಿತ್ರಿಸಲ್ಪಟ್ಟಿವೆ. ಮನುಷ್ಯನಿಗೆ ಸಮಾಜದ ವ್ಯವಹಾರದಲ್ಲಿ ಎದುರಾಗುವ ಬಿಕ್ಕಟ್ಟಿನ ಪ್ರಸಂಗಗಳು ಹೇಗೆ ದೈವಕೃಪೆಯಿಂದ ಹಾಗು ಸತ್ಯ ವರ್ತನೆಯಿಂದ ಪರಿಹಾರವಾಗುವವೆಂಬದು ಕಥಾ ರಹಸ್ಯದ ಮೂಲಕ ವ್ಯಕ್ತಮಾಡಲ್ಪಟ್ಟಿವೆ.

ಈ ಬರಹಗಾರನು ಸಾಹಿತ್ಯದ ವಿದ್ಯಾರ್ಥಿಯು. ಕ್ರಿ. ಶ ೧೯೦೦ ರಲ್ಲಿ ಜನಿಸಿದವನು. ಇಪ್ಪತ್ತನೆಯ ವಯಸ್ಸಿನಿಂದ ಸಾಮಾಜಿಕ, ಧಾರ್ಮಿಕ, ತಾತ್ವಿಕ ಲೇಖನಗಳನ್ನು ಮಾಸಿಕಗಳಲ್ಲಿ ಪ್ರಕಟಿಸುತ್ತ ಬಂದವನು. ಪ್ರಥಮ ಪುಸ್ತಕ ಪ್ರಕಟನೆ, "ನೀತಿ ವಿನೋದ ಕತೆಗಳು", ೨ನೆಯದು ತಾತ್ವಿಕ ಕತೆಯುಳ್ಳ "ಅಮೃತಧಾರೆ" ಎಂಬದು. ೩ನೆಯದು "ಸಾಮಾಜಿಕ ದಿವ್ಯ ಜೀವನ (ಪ್ರಕಟವಾಗತಕ್ಕುದು). ಕನ್ನಡದಲ್ಲಿ ಮುದ್ರಕರ ಹಾಗು ಪ್ರಕಾಶಕರ ಸಹಾಯವು ದೊರೆಯದಂತಿರುವ ಮೂಲಕ ಬರಹಗಾರರ ಉತ್ಸಾಹವು ಕುಗ್ಗುವದು ಸ್ವಾಭಾವಿಕವಾಗಿದೆ. ಆದರಂತೆ ಓದುಗರಿಂದ ಉತ್ತೇಜನವು ದೊರೆಯದಂಥ ಸ್ಥಿತಿಯೂ ಇರುವದು ನಿಜವು. ಓದುವದು ಮಾನಸಿಕ ಶಾಂತಿ ಸುಖಗಳಿಗೆ ಕಾರಣವಾಗಿರುವದರಿಂದ ಜನತೆಯು ಇದನ್ನು ಅಲಕ್ಷಿಸಬಾರದೆಂದು ಬರಹಗಾರನ ಇಚ್ಛೆಯುಂಟು.

ತಾ. ೨೦-೫-೧೯೫೪
ಹಾವೇರಿ.

ವೀರಪ್ಪ ಯಗಟಿ.

# ಮೋಹದ ಮಹಾಜಾಲ

## ವಿಷಯಾನುಕ್ರಮಣಿಕೆ

ಪ್ರಕರಣ ೧

# ಕಾಳರಾತ್ರಿಯ ದುರಂತ

ಅಗಾಧವಾದ ಅಂಧಕಾರ. ಶ್ರಾವಣ ಮಾಸದ ಅಮಾವಾಸ್ಯೆಯ ರಾತ್ರಿಯ ಮಧ್ಯಸಮಯ. ಎತ್ತ ನೋಡಿದರೂ ಕಲ್ಲಿದ್ದಲಿನ ಬೆಟ್ಟಗಳಂತೆ ಹೆಣೆದುಕೊಂಡಿರುವ ದಟ್ಟವಾದ ಕತ್ತಲೆ. ಆ ದಿನದ ಸಂಜೆಯಿಂದ ಆಕಾಶದಲ್ಲಿ ಮೋಡಗಳು ನಿಬಿಡವಾಗಿ ಹರಡಿದ್ದವು. ಸಿಡಿಲು ಮಿಂಚುಗಳ ಖಡಖಡಾಟವು ಜನರ ಕಿವಿಗಳಿಗೆ ಗಡುಚಿಕ್ಕಿದ್ದವು. ಸತತವಾಗಿ ಸುರಿದ ಮಳೆಯಿಂದ ಹಳ್ಳ ಹೊಳೆಗಳು ಭೋರೆಂದು ಗರ್ಜಿಸುತ್ತ ಹರಿಯುತ್ತಿದ್ದವು. ಮನೆಗಳ ಹೊರಗಾಗಲೀ ಬೀದಿಗಳಲ್ಲಾಗಲೀ ಜನರ ಸುಳಿದಾಟವಿರಲಿಲ್ಲ. ಪುಣ್ಯ ನಗರವು (ಪುಣೆ) ಸದ್ದಿಲ್ಲದೆ ನಿದ್ರೆಯಲ್ಲಿ ನಿರತವಾಗಿತ್ತೆಂದು ತೋರುತ್ತಿತ್ತು. ಅಂಥ ಮಧ್ಯರಾತ್ರಿಯ ಸಮಯದಲ್ಲಿ ಒಬ್ಬ ಕನ್ಯೆಯು ಒಂದು ಮಹಡಿಯ ಮೇಲಿಂದ ಕೆಳಗಿಳಿದು ಬೀದಿಯಲ್ಲಿ ಬಂದು ನಿಂತಳು. ಅವಳ ಕೈಯಲ್ಲಿ ಒಂದು ಮಸುಕಾದ ಕಂದೀಲು ಮಾತ್ರ ಇತ್ತು. ಅಷ್ಟು ಕತ್ತಲೆ ಕವಿದ ಹಾಗು ನಿರ್ಜನವಾದ ರಾತ್ರಿಯ ಕಾಲದಲ್ಲಿ ಹೊರಹೊರಡಲು ಎಂಥ ಕಟ್ಟಾಳುವಿಗೂ ಧೈರ್ಯಸಾಲದು.

ಹೀಗೆ ಹೊರಗೆ ಸಾರಲು ಅವಳಿಗೆ ಕಾರಣವೇನಿರಬಹುದು? ಜೀವನದಲ್ಲಿಯ ಮಹಾತ್ವಾಕಾಂಕ್ಷೆಯು ವಿಫಲವಾಗಿರುವಾಗ, ಏಕಮುಖವಾದ ಮನೋರಥವು ಕೈಗೂಡದಿರುವಾಗ, ಕೈಕೊಂಡ ಕಾರ್ಯಗಳು ಒಂದರ ಮೇಲೊಂದು ಸಫಲವಾಗದೆ ಹಾನಿಯು ಸಂಭವಿಸಿದಾಗ,

ಬಡತನದ ಭಾರದಿಂದ ಹೆಂಡಿರುಮಕ್ಕಳನ್ನು ಸಲುಹಲು ಸಾಧ್ಯವಾಗದ್ದರಿಂದ, ಸಂಸಾರದಲ್ಲುಂಟಾಗುವ ದುಃಖಪರಂಪರೆಗಳ ಆಘಾತದಿಂದ; ಸಹೋದರರ ದ್ವೇಷ, ವಂಚನೆ, ಕಲಹಗಳ ಕಾಟದಿಂದ, ರೋಗರುಜಿನಗಳ ಸಂತಾಪದಿಂದ; ಪಾಪಕೃತಿಗಳ ಪಶ್ಚಾತ್ತಾಪದಿಂದ ವೈರಿಗಳಿಂದಾದ ಅಪಜಯದ ಮೂಲಕ ಉಂಟಾದ ಅಪಮಾನವನ್ನು ಸಹಿಸಲಾರದುದರಿಂದ ಇವೇ ಮೊದಲಾದ ಕಾರಣಗಳ ಮೂಲಕ ಮನುಷ್ಯನು ನಿರಾಶೆಗೊಂಡು ಜೀವವನ್ನು ತೊಲಗಲು ಸಿದ್ಧನಾಗುವನು. ಈ ಕನ್ಯೆಗಾದರೂ ಇವುಗಳಲ್ಲಿ ಯಾವುದಾದರೊಂದು ಕಾರಣವು ಇದ್ದಿರಬೇಕಲ್ಲವೇ? ಅಥವಾ ಅತ್ತೆಯ ಕಾಟವು ಸಹಿಸಲಸಾಧ್ಯವಾಗಿರಬಹುದೇ? ಇಲ್ಲವೇ ಗಂಡನ ತಿರಸ್ಕಾರದಿಂದ ಜೀವದ ಹಂಗುದೊರೆಯಲು ದೃಢ ನಿಶ್ಚಯಮಾಡಿರಬಹುದೇ? ನಿಜವಾದ ಕಾರಣವೇನಿತ್ತೆಂಬುದನ್ನು ಹೇಳಲು ಸಾಧ್ಯವಿಲ್ಲ.

ಅವಳು ಮನೆಯೊಳಗಿಂದ ಬೀದಿಯಲ್ಲಿ ಬಂದು ಅತ್ತಿತ್ತ ನೋಡುತ್ತಾಳೆ. ಸುಯ್ಯೆಂದು ಬೀಸುವ ಗಾಳಿಯ ಹೊರತು ಮತ್ತಾವ ಜೀವಿಗಳ ಸುಳಿದಾಟವೇ ಕಾಣದು. ಅವಳದು ಅಪ್ರತಿಮವಾದ ಸಹಜ ಸೌಂದರ್ಯವಿದ್ದರೂ ಚಿಂತೆಯ ಮೂಲಕ ಭೀಕರ ಸ್ವರೂಪವನ್ನು ತಾಳಿತ್ತು. ರೂಢಿಯಂತೆ ನಯವಾದ ರೇಶಿಮೆಯ ಪೀತಾಂಬರವನ್ನುಡುವ ಬದಲು ಹರಿದ ಹಳೆಯ ಸೀರೆಯನ್ನುಟ್ಟಿದ್ದಳು. ಹಾವಿನಂತೆ ಹೆಣೆದ ಹೆರಳನ್ನು ಧರಿಸುವ ಬದಲು ಕೂದಲನ್ನು ಕೆದರಿಕೊಂಡು ಕದನಕ್ಕೆ ಹೊರಟ ಕಾಳಿಯಂತಹ ಕರಾಳ ರೂಪವನ್ನು ತಾಳಿದ್ದಳು. ಶಿವನಿಗೆ ಆಮಂತ್ರಣ ಕೊಡದೆ ಯಜ್ಞವನ್ನು ಪ್ರಾರಂಭಿಸಿದ ದಕ್ಷಬ್ರಹ್ಮನನ್ನು ಶಿಕ್ಷಿಸಲು ಹೊರಟ ವೀರಭದ್ರನ ಅದ್ಭುತ ಆಕಾರವು ಅವಳಲ್ಲಿ ವ್ಯಕ್ತವಾಗುತ್ತಿತ್ತು. ದಾನವರ ತ್ರಿಪುರಗಳನ್ನು ಸುಟ್ಟು ಬೂದಿಮಾಡಲು ಹೊರಟ ಮುಕ್ಕಣ್ಣನ ಕಿಡಿಗಣ್ಣುಗಳಿಂದ ಹೊರಡುವ ಜ್ವಾಲೆಗಳಂತೆ ಅವಳ ಕಣ್ಣುಗಳಿಂದ ಕಿಡಿಗಳು ಹೊರಬೀಳುತ್ತಿದ್ದವು. ಯಮನನ್ನು ದಂಡಿಸಲು ದುಡುಕುತ್ತಿರುವ ಕಾಲಭೈರವನ ಕಠೋರ ಮುದ್ರೆಯು ಅವಳದಾಗಿತ್ತು.

ಅವಳು ತನ್ನ ಜೀವಕ್ಕೆ ಬೇಸತ್ತ ಮೂಲಕವೇ ಈ ಉಗ್ರರೂಪದ ಪರಿಣಾಮವಾಗಿತ್ತು. ಹೀಗಿದ್ದರೂ ಉಗ್ರರೂಪಕ್ಕಿಂತ ದುಃಖದ ಅಂಶವು ಹೆಚ್ಚಾಗಿದ್ದುದು ಒಡೆದು ಕಾಣಿಸುತ್ತಿತ್ತು. ಅವಳ ಕಂದಿದ ಮುಖ, ಕುಂದಿದ ಮನಸ್ಸು, ನೊಂದ ಹೃದಯ, ಬೆಂದ ಒಡಲುಗಳು ಅಸಹ್ಯವಾದ ಜೀವಿತದ ತಾಪವನ್ನು ಸಂದೇಹವಿಲ್ಲದೆ ಸೂಚಿಸುತ್ತಿದ್ದವು. ಎಂಥ ವಜ್ರದ ಬಿರುಸಾದ ಎದೆಯುಳ್ಳವನಿಗಾದರೂ ಆ ದಿನದ ಕಾರ್ಗತ್ತಲೆಯ ರಾತ್ರಿಯಲ್ಲಿ ಸಂಚರಿಸಲು ಧೈರ್ಯವಾಗುತ್ತಿರಲಿಲ್ಲ. ಈ ಹೆಣ್ಣುಮಗಳು ನಿರ್ಭೀತಿಯಿಂದ ಮುಂದೆ ಸಾಗಿದಳು. ಆ ವೇಳೆಯಲ್ಲಿ ಅವಳ ನೆರೆಮನೆಯ ಮುದುಕನೊಬ್ಬನು ಮೂತ್ರವಿಸರ್ಜನೆಗಾಗಿ ಹೊರಗೆ ಬಂದನು. ಕತ್ತಲೆಯಲ್ಲಿ ಸಾಗುತ್ತಿರುವ ವ್ಯಕ್ತಿಯನ್ನು ಕಂಡು ಅವನು, "ನೀನಾರು, ಎಲ್ಲಿಗೆ ಹೊರಟಿರುವೆ" ಎಂದು ಕೇಳಿದನು. ಅದಕ್ಕೆ ಉತ್ತರವೇ ಬರಲಿಲ್ಲ. ಮುದುಕನು ಅದೊಂದು ದೆವ್ವವೋ, ಭೂತವೋ ಎಂದು ಭಯಭರಿತನಾಗಿ ತನ್ನ ಮನೆಯೊಳಗೆ ಹೋಗಿ ಕದವನ್ನು ಹಾಕಿಕೊಂಡನು.

ಹೆಣ್ಣುಮಗಳು ಭರದಿಂದ ಬೀದಿಯಲ್ಲಿ ಸಾಗಿದಳು. ಜಗತ್ತೆಲ್ಲವೂ ಅವಳಿಗೆ ಶೂನ್ಯಮಯವಾಗಿ ಕಂಡಿತು. ಅವಳ ದುರ್ದೈವಕ್ಕೆ ಆತ್ಮ ಶಾಂತಿಯನ್ನೀಯಲು ಆಕಾಶದಲ್ಲಿ ಚಂದ್ರನಾಗಲಿ, ನಕ್ಷತ್ರ ಮಂಡಲ ಗಳಾಗಲಿ ಇರಲಿಲ್ಲ. ಪರ್ವತಗಳಂತೆ ನಿಬಿಡವಾಗಿದ್ದ ಮೋಡಗಳು ತಲೆಯಮೇಲೆ ಕತ್ತರಿಸಿ ಬೀಳುವಂತೆ ಆಕಾಶದಲ್ಲಿ ತೇಲುತ್ತಿದ್ದವು. "ಸಾಯುವವನಿಗೆ ಸಾಗರವು ಮೊಳಕಾಲು ಮಟ್ಟ" ವೆಂಬಂತೆ ಈ ವ್ಯಕ್ತಿಗೆ ಮೋಡಗಳ ಭೀತಿಯು ಸ್ವಲ್ಪಾದರೂ ಎನಿಸಲಿಲ್ಲ. ಅವಳು ಬೀದಿಯಿಂದ ಬೀದಿಗೆ ಸಾಗುತ್ತ ಕೆಲಹೊತ್ತಿನ ಮೇಲೆ ಪಟ್ಟಣದ ಹೊರಭಾಗದಲ್ಲಿರುವ ನದಿಯ ದಂಡೆಗೆ ಬಂದಳು. ಮಹತ್ತರವಾದ ಮಳೆಗಾಲವಿದ್ದುದರಿಂದ ಪ್ರವಾಹವು ಒಡಲನ್ನು ಮೀರಿ ಹರಿಯುತ್ತಿದೆ. ತೆರೆಗಳ ಪ್ರಚಂಡ ಧ್ವನಿಯು ಪ್ರತಿಧ್ವನಿಯನ್ನುಂಟುಮಾಡುತ್ತಿರುವದು. ನದಿಯಮೇಲೊಂದು ಸೇತುವೆ ಇತ್ತು. ಅದು ಫರ್ಗ್ಯೂಸನ್ ಕಾಲೇಜ ಹಾಗು ಗಣೇಶ ಖಿಂಡಿಯ ಕಡೆಗೆ ಹೋಗುವ ಮಾರ್ಗವಾಗಿತ್ತು. ಈ ಹೆಣ್ಣುಮಗಳು ಸೇತುವೆಯನ್ನೇರಿ ಮಧ್ಯಭಾಗಕ್ಕೆ ಬಂದು ನಿಂತಳು.

ಆಗ ಸೇತುವೆಯ ಒಂದು ಪಕ್ಕದಲ್ಲಿ ಒಬ್ಬ ಅನಾಥ ಭಿಕ್ಷುಕನು ಮಳೆಯಿಂದ ತೋಯಿಸಿಕೊಂಡು, ಚಳಿಯಿಂದ ನಡಗುತ್ತ, ಕೂಳಿಲ್ಲದೆ ಕೊರಗುತ್ತ 'ಉಮ್, ಉಮ್' ಎಂದು ನರಳುತ್ತ ಕುಳಿತಿದ್ದನು. ಅವನ ಸಮೀಪದಲ್ಲಿ ಬೀದಿಯ ಬಿಡಾಡಿ ನಾಯಿಯೊಂದು ಮುಪ್ಪಿನಿಂದ ಮರಣ ಸಮೀಪವುಳ್ಳದ್ದಾಗಿ 'ಸುಕ್, ಸುಕ್' ಎಂದು ಸಾವಕಾಶವಾಗಿ ಉಸಿರು ಗರೆಯುತ್ತ ಮಲಗಿದ್ದಿತು. ಆಗ ಕ್ಷಣ ಕ್ಷಣಕ್ಕೆ ಪ್ರಕಾಶಿಸುವ ಮಿಂಚಿನ ಮಿರುಗಿನಲ್ಲಿ ಈ ಬಡಪ್ರಾಣಿಗಳ ನೋಟವು ಅಲ್ಲಿಬಂದು ನಿಂತುಕೊಂಡ ತರುಣಿಯ ಕಣ್ಣಿನಲ್ಲಿ ಕಟ್ಟಿದಂತಾಯಿತು. ಆ ಬಡ ಪ್ರಾಣಿಗಳ ಸಂಕಟವನ್ನು ಕಂಡು ಅವಳ ಹೃದಯವು ಕರಗಿ ನೀರಾಯಿತು. ಆದರೆ ಮಾಡುವದೇನು? ಅವಳಾದರೋ ಜೀವವನ್ನು ತೊರೆದುಬಿಡುವ ತ್ವರೆಯಿಂದ ಬಂದವಳು. ಅವಳು ತನ್ನೊಳಗೆ "ನಾನು ಈ ಬಡ ಪ್ರಾಣಿಗಳನ್ನು ಮನೆಗೊಯ್ದರೆ ಅನ್ನ, ನೀರು, ಬಟ್ಟೆಗಳನ್ನಿತ್ತು ಇದಕ್ಕೆ ಜೀವದಾನ ಮಾಡಬಲ್ಲೆನು. ಆದರೆ ನನ್ನ ಮನೆ ನನಗೆ ಸ್ಮಶಾನಪ್ರಾಯ, ನನ್ನ ಮನೆಯ ಮಂದಿ ನನ್ನ ಮೇಲೆ ಅನಾದರವುಳ್ಳವರು. ಆದರೂ ಕಷ್ಟ ದಲ್ಲಿರುವ ಪ್ರಾಣಿಗಳನ್ನು ಕಂಡು ಕೈಲಾದ ಮಟ್ಟಿಗೆ ಸಹಾಯ ಮಾಡ ದಿರುವ ಮಾನವನ ಬಾಳು ಕೀಳು ಜೀವಿಗಿಂತಲೂ ಕಡೆಯಾದದ್ದು. ಆತ್ಮಹತ್ಯವನ್ನು ಮಾಡಿಕೊಂಡು ಮುಂದೆ ನರಕದಲ್ಲಿ ವಾಸವಾಗಿದ್ದು ಕೊಂಡು ನರಳುವದಾದರೂ ಏನು ಸುಖ?" ಎಂದು ಆಲೋಚಿಸಿದಳು.

ಈ ಬಗೆಯ ಪರಸ್ಪರ ವಿರೋಧವಾದ ವಿಚಾರಗಳ ತಾಕಲಾಟ ದಿಂದ ಅವಳು ಕ್ಷಣಕಾಲ ಸಂದೇಹದ ತೊಡಕಿನಲ್ಲಿ ಬಿದ್ದಳು. ಜೀವ ಹತಿಯು ಆತ್ಮ ಶ್ರೇಯಸ್ಸಿಗೆ ಆತಂಕವಾದದ್ದೆಂಬುದು ಒಂದು ಮಹತ್ವದ ಮಾತು. ಜೀವಿಸಿದ್ದಾಗ್ಯೂ ಮನೋಶಾಂತಿಯಿಲ್ಲದಿರಲು ಜೀವದ ಹಂಗಿ ನಿಂದೇನು ಪ್ರಯೋಜನವೆಂಬುದು ಮತ್ತೊಂದು ಸಮಸ್ಯೆ. ತರುಣಿಯು ಇವೆರಡು ವಿಷಯಗಳನ್ನು ತೂಗಿ ನೋಡ ಹತ್ತಿದಳು. ಆದರೆ ವಿಚಾ ರದ ದಂಡಿಗೆಯ ನಡುವಿನ ಸೂತ್ರವಾದ ಭಾವನೆಯ ಭಾರವು ಆತ್ಮ ಹತ್ತ್ಯೆಯ ಕಡೆಗೆ ವಾಲಿತು. ಅವಳ ಸಂದೇಹದ ಹೊಯ್ದಾಟವು ಒಮ್ಮೆಲೇ ನಿಂತು ಹೋಯಿತು. ಆಗ ಅವಳು ತನ್ನ ಸೀರೆಯನ್ನು ಸಾವ

ರಿಸಿಕೊಂಡು ವೀರಗಚ್ಚೆಯನ್ನು ಹಾಕಿಕೊಂಡಳು. ಸೆರಗಿನಿಂದ ಟೊಂಕ ವನ್ನು ಬಿಗಿದುಕೊಂಡಳು; ಆ ಮೇಲೆ ಸೇತುವೆಯ ಪಕ್ಕದ ಕಟ್ಟೆಯನ್ನೇರಿ ನೀಟಾಗಿ ನಿಂತುಕೊಂಡಳು; ತಡಮಾಡದೆ ನದಿಗೆ ಧುಮುಕಲು ಸಿದ್ಧಳಾ ದಳು. ಅಷ್ಟರಲ್ಲಿ ಪಟ್ಟಣದ ಕಡೆಯ ಸೇತುವೆಯ ತುದಿಯಲ್ಲಿ ಕೆಲ ಜನರು ಕಾಲುನಡಿಗೆಯಿಂದ ಬರುವ ಸಪ್ಪಳವು ಕೇಳಿಸಿತು. ಆಗ ತರು ಣಿಯು ಗಾಬರಿಯಾಗಿ ಇನ್ನು ಕಾಲವಿಳಂಬ ಮಾಡುವದು ವಿಹಿತವಲ್ಲ ವೆಂದು ಬಗೆದು ಒಮ್ಮೆಲೇ ಕೆಳಮುಖಮಾಡಿಕೊಂಡು ಪ್ರವಾಹದಲ್ಲಿ ಜಿಗಿ ದಳು. ಅವಳು ಬಿದ್ದಕ್ಷಣದಲ್ಲಿ 'ಧುಡುಮ್' ಎಂಬ ಶಬ್ದವುಂಟಾಗಿ ದೂರದಲ್ಲಿ ಪ್ರತಿ ಧ್ವನಿಯನ್ನುಂಟು ಮಾಡಿತು. ತರುಣಿಯು ಪ್ರವಾಹ ದಲ್ಲಿ ಹಾರಿಕೊಂಡ ಕ್ಷಣವೇ ಪಟ್ಟಣದಿಂದ ಬಂದವರು ಅಲ್ಲಿಗೆ ತಲುಪಿ ದರು. ಅವರು ಒಂದೇ ನಿಮಿಷ ಮೊದಲು ಬಂದಿದ್ದರೆ ಆ ತರುಣಿ ಯನ್ನು ಉಳಿಸುತ್ತಿದ್ದರು. 'ಧುಡುಮ್' ಎಂಬ ಸಪ್ಪಳವಾದಾಗ ಆ ಜನರು ನಿರಾಶರಾಗಿ, 'ಹಾಯ್ ಮಹಾದೇವ' ಎಂದು ಗಟ್ಟಿಯಾಗಿ ಕೂಗಿದರು. ಆದರೆ ಮಾಡುವದೇನು! ಮಹಾಪ್ರವಾಹ ಮೇರೆ ತಪ್ಪಿ ಹರಿಯುತ್ತಿದೆ. ತರುಣಿಯ ದೇಹವು ಎತ್ತ ಸೆಳೆದೊಯ್ಯಲ್ಪಟ್ಟಿತೆಂಬುದು ಕಾಳರಾತ್ರಿಯ ಕತ್ತಲೆಯಲ್ಲಿ ತಿಳಿಯದಾಯಿತು.

ಪ್ರಕರಣ ೧

# ನಾಯಕನ ಬೀಡು

ಪುಣೆಯಿಂದ ಎಂಟುಹತ್ತು ವೈಲುಗಳ ದೂರದಲ್ಲಿ ಸುಖವಾಸಲ ವೆಂಬದೊಂದು ಹಳ್ಳಿ. ಅದು ಪಶ್ಚಿಮ ಘಟ್ಟಗಳ ಸಾಲುಗಳ ಅಡಿಯಲ್ಲಿ ನೆಲಸಿದೆ. ಅಲ್ಲಿ ಎರಡು ಬೆಟ್ಟಗಳ ಮಧ್ಯದಲ್ಲಿ ಮುಳಾ ನದಿಯು ಹರಿಯುತ್ತಿದೆ. ಆ ಬೆಟ್ಟಗಳೆರಡನ್ನೂ ಬಿಗಿದು ಕಟ್ಟಿರುವಂತೆ ಒಂದು ಆಣೆಕಟ್ಟು ಕಟ್ಟಲ್ಪಟ್ಟಿದೆ. ಅಲ್ಲಿ ನೀರಿನ ಸಂಗ್ರಹದ ಒಂದು ವಿಶಾಲವಾದ ಸರೋವರವೇ ಆಗಿದೆ. ಸಾವಿರಾರು ಹೊಲಗಳಿಗೆ ನೀರಾವರಿಯ ಸೌಲಭ್ಯವು ದೊರಕಿದೆ. ಹೊಲಗಳು ಯಾವಾಗಲೂ ಕಬ್ಬು, ಭತ್ತ, ತೆಂಗು, ಬಾಳೆ ಮುಂತಾದ ಧಾನ್ಯ, ದವಸಗಳ ಪೈರುಗಳಿಂದ ಶೋಭಿಸುತ್ತವೆ. ನವಿಲು, ಕೋಗಿಲೆ, ಗಿಳಿ, ಪಾರಿವಾಳ ಮುಂತಾದ ಪಕ್ಷಿಗಳ ಇಂಪಾದ ಕಲಕಲ ಧ್ವನಿಯು ಮನೋಹರವಾಗಿ ತೋರುವದು. ಈ ಭೂಮಿಗಳಲ್ಲಿ ೨೦೦ ಎಕರೆ ಭೂಮಿ ಪುಣೆಯ ಜಮೀನದಾರನಾದ ಸದಾಶಿವರಾಯನ ಒಡೆತನಕ್ಕೆ ಸೇರಿತ್ತು. ಇದರಿಂದ ಅವನಿಗೆ ಪ್ರತಿ ವರ್ಷ ರೂ. ೩೦,೦೦೦ಗಳ ಉತ್ಪನ್ನ ಲಭಿಸುತ್ತಿತ್ತು.

ಈ ಉತ್ಪನ್ನದ ಹೊರತಾಗಿ ಸದಾಶಿವರಾಯನಿಗೆ ಪುಣೆಯಲ್ಲಿರುವ ಇಮಾರತುಗಳ ಬಾಡಿಗೆಯ ಮೂಲಕ ರೂ. ೨೫೦೦೦ಗಳ ಉತ್ಪನ್ನವಿತ್ತು. ಸುಖವಾಸಲ ಹಳ್ಳಿಯಲ್ಲಿ ಅವನ ಹೊಲಗಳ ಬೇಸಾಯದ ಕೆಲಸದಲ್ಲಿ ಸಾವಿರಾರು ಕೂಲಿಯ ಜನರು ಕೆಲಸ ಮಾಡುತ್ತಿದ್ದರು. ಆ ಕೆಲಸಗಾರರಲ್ಲಿ ಜನಾರ್ದನ–ಲಕ್ಷ್ಮಿ ಎಂಬ ಗಂಡಹೆಂಡರಿದ್ದರು. ಸದಾಶಿವರಾಯನು ತನ್ನದೊಂದು ಹೊಲದ ಪಕ್ಕದಲ್ಲಿರಲು ಒಂದು ಗುಡಿಸಲನ್ನು ಹಾಕಿಕೊಟ್ಟಿದ್ದನು. ಈ ದಂಪತಿಗಳು ಬಡವರಾದರೂ ಪ್ರಮಾಣಿಕರು, ಸದಾಚಾರಿಗಳು, ಮನಮುಟ್ಟಿ ಕೆಲಸಮಾಡಿ ಸದಾಶಿವರಾಯನ ಸೊತ್ತನ್ನು ರಕ್ಷಣೆ ಮಾಡುತ್ತಿದ್ದರು. ಕೇವಲ ಇವರ ಮೇಲೆ ವಿಶ್ವಾಸವಿಟ್ಟು, ಸದಾಶಿವರಾಯನು ಅಲ್ಲಿಗೆ ಎಂದಾದರೊಮ್ಮೆ ಮೇಲ್ವಿ

ಚಾರಣೆಗಾಗಿ ಬರುತ್ತಿದ್ದನು. ಈ ದಂಪತಿಗಳಿಗೆ ಶಂಕರನೆಂಬ ಒಬ್ಬ ಐದು ವರ್ಷದ ಮಗನಿದ್ದನು. ಇವನು ಸುಂದರನೂ ತೀಕ್ಷ್ಣ ಬುದ್ಧಿಯುಳ್ಳವನೂ ಆಗಿದ್ದನು. ಅವನಿಗೆ ಶಾಲೆಗೆ ಹೋಗುವ ವಯಸ್ಸು. ಆದರೆ ಹಳ್ಳಿಯಲ್ಲಿ ಶಾಲೆಯಿರಲಿಲ್ಲ.

ಕೆಲದಿನಗಳ ಮೇಲೆ ಸದಾಶಿವರಾಯನು ಪೈರುಗಳ ಸ್ಥಿತಿಯನ್ನು ನೋಡುವದಕ್ಕಾಗಿ ಹಳ್ಳಿಗೆ ಬಂದನು. ಜನಾರ್ಧನನ ಮೇಲೆ ಪೂರ್ಣ ಪ್ರೇಮವಿದ್ದ ಮೂಲಕ ಅವನ ಗುಡಿಸಲದಲ್ಲಿಯೇ ಬಂದು ಕುಳಿತನು. ಆಗ ಶಂಕರನು ಸದಾಶಿವರಾಯನಿಗೆ ಹಣ್ಣುಹಂಪಲುಗಳನ್ನು ತಿನ್ನಲಿಕ್ಕೆ ಕೊಟ್ಟು ಉಪಚರಿಸಿದನು. ಸವಿಮಾತುಗಳಿಂದ ಅವನನ್ನು ಬೆರಗುಗೊಳಿಸಿದನು. ಆಗ ಸದಾಶಿವರಾಯನು ಅವನ ಜಾಣತನ, ಚಟುವಟಿಕೆ, ಅಸಾಧಾರಣವಾದ ಮುಖಮುದ್ರೆಗಳನ್ನು ನೋಡಿ ಅವನು ಮುಂದೆ ದೊಡ್ಡ ವ್ಯಕ್ತಿಯಾಗುವನೆಂದು ಭಾವಿಸಿದನು. ಆಗ ಅವನು ಜನಾರ್ದನನ್ನು ಕುರಿತು, "ನಿನ್ನ ಮಗನನ್ನು ನನ್ನ ಸಂಗಡ ಪುಣೆಗೆ ಕಳಿಸು. ನಾನು ಅವನನ್ನು ಶಾಲೆಗೆ ಕಳಿಸಿ ಅವನ ವಿದ್ಯಾಭ್ಯಾಸ ಮಾಡಿಸುವೆ" ಎಂದು ಹೇಳಿದನು. ಅದನ್ನು ಕೇಳಿ ಶಂಕರನ ತಂದೆ ತಾಯಿಗಳು ಹರ್ಷಿತರಾದರು. ಆದರೆ ತಮಗಿರುವ ಒಬ್ಬನೇ ಮಗನನ್ನು ಅಗಲಿರುವದು ಹೇಗೆ? ಅವನಿಲ್ಲದೆ ಸಮಾಧಾನ, ಶಾಂತಿಗಳು ಯಾವದರಿಂದ ದೊರೆಯಬೇಕು? ಈ ವಿಚಾರವು ಅವರಲ್ಲಿ ದುಗುಡವನ್ನುಂಟುಮಾಡಿತು. ಆದಾಗ್ಯೂ ತಮ್ಮ ಮಗನು ಶಿಕ್ಷಣಹೊಂದಿ ಉನ್ನತ ಸ್ಥಿತಿಯನ್ನು ಹೊಂದಿದರೆ ತಮ್ಮ ಬಡತನದ ಬಾಳು ಕೊನೆಗಂಡು ತಾವು ಸುಖಿಗಳಾಗುವೆವೆಂಬ ಭಾವನೆಯು ಅವರಲ್ಲಿ ಉದಯವಾಯಿತು. ಆದುದರಿಂದ ಅವರು ಶಂಕರನನ್ನು ತಮ್ಮ ಒಡೆಯನ ಸಂಗಡ ಕಳಿಸಲು ಒಪ್ಪಿದರು.

ಆ ದಿನ ಸಂಜೆಯ ಮುಂದೆ ಸದಾಶಿವರಾಯನು ತನ್ನ ಕುದುರೆಯ ರಥದ ಮೇಲೆ ಶಂಕರನನ್ನು ಕುಳ್ಳಿರಿಸಿಕೊಂಡು ಪುಣೆಗೆ ಹೊರಟನು. ಆಗ ಜನಾರ್ದನ, ಲಕ್ಷ್ಮಿಯರು ಒಂದು ಮೈಲು ದೂರದವರೆಗೆ ರಥದ ಹಿಂದೆ ಓಡುತ್ತ ನಡೆದು ರಥವು ಕಣ್ಮರೆಯಾಗುವ ವರೆಗೆ ತಮ್ಮ

ಮಗನ ಮೋರೆಯನ್ನು ನೋಡಿದರು. ಎಷ್ಟಾದರೂ ಹಡೆದ ಕರುಳಿನ ಪ್ರೇಮವು ಹೆಚ್ಚಿನದು. ಇದರ ಮೇಲೂ ಹುಟ್ಟಿದಂದಿನಿಂದ ಸಾಕಿ, ಸಲಹಿ, ಮುದ್ದುಕೊಟ್ಟು, ಕೂಸಿನ ಆಟನೋಟ, ತೊದಲ್ನುಡಿಗಳ ಮಾಧುರ್ಯದಿಂದ ಮನಸೋತು ಕೂಸೇ ತಮ್ಮ ಜೀವಿತಸುಖದ ಸರ್ವಾಧಾರವೆಂದು ಭಾವಿಸಿಕೊಂಡವರಿಗೆ ಒಮ್ಮೆಲೇ ಅಂಥ ಕೂಸಿನ ಅಗಲುವಿಕೆಯುಂಟಾದಾಗ ಎಷ್ಟು ಕಳವಳವುಂಟಾಗಿರಬೇಕು! ಆ ದಿನ ರಾತ್ರಿ ಅವರಿಗೆ ಸರಿಯಾಗಿ ನಿದ್ರೆಯೇ ಬರಲಿಲ್ಲ. ಎರಡು ಮೂರು ದಿನಗಳವರೆಗೆ ಅವರಿಗೆ ಊಟ, ಉಡಿಗೆಗಳು ರುಚಿಸಲಿಲ್ಲ. ನಾಲ್ಕನೆಯ ದಿನ ಸದಾಶಿವರಾಯನು ಅವರಿಗೆ ಸಮಾಧಾನಮಾಡಲೆಳಸಿ ಒಬ್ಬ ಆಳಿನ ಸಂಗಡ ಶಂಕರನು ಸುಖದಿಂದಿರುವನೆಂಬ ಸುದ್ದಿಯನ್ನು ಕಳಿಸಿದನು. ಆಗ ಜನಾರ್ದನ—ಲಕ್ಷ್ಮಿಯರು ಆನಂದಪಟ್ಟು ಮಗನ ಚಿಂತೆಯನ್ನು ತೊರೆದರು.

ಸದಾಶಿವರಾಯನ ಮನೆಯು ಮೂರು ಅಂತಸ್ತುಗಳ ಬಹು ದೊಡ್ಡದಾದ ಮಹಲು. ಅದರಲ್ಲಿ ವಿಶಾಲವಾದ ೩೦ ಕೋಣೆಗಳಿದ್ದುವು ಹಿಂದಿನ ಆವಾರದಲ್ಲಿ ಬೇರೆ ೮ ಕೋಣೆಗಳು. ಅವುಗಳ ಕೆಲವು ಭಾಗದಲ್ಲಿ ಆಳುಗಳ ವಸತಿಯಿತ್ತು. ಕೆಲವು ಕೋಣೆಗಳಲ್ಲಿ ಹತ್ತಿಪ್ಪತ್ತು ಹಿಂಡುವ ದನಗಳನ್ನು ಕಟ್ಟುವ ಹಕ್ಕೆಗಳಿದ್ದುವು. ಒಂದು ಆವರಣದಲ್ಲಿ ಮೋಟರ ಬಂಡಿಯಿಡಲು, ಮತ್ತೊಂದರಲ್ಲಿ ಕುದುರೆ ಹಾಗು ರಥಗಳಿಗಾಗಿ ವ್ಯವಸ್ಥೆ ಇತ್ತು. ಮಹಡಿಗಳಲ್ಲಿ ಪ್ರಶಸ್ತವಾದ ಸಭಾಮಂಟಪಗಳಿದ್ದುವು. ರಾತ್ರಿಯಲ್ಲಿ ವಿದ್ಯುಲ್ಲತೆಯ ಪ್ರಕಾಶದಿಂದ ಮನೆಯು ಅರಮನೆಯಂತೆ ಶೋಭಿಸುವದು. ಮಹಡಿಯಮೇಲೆ ಒಂದು ಹಾಡುವ ಯಂತ್ರ (Gramaphone) ಹಾಗು ಬಾನುಲಿಯಂತ್ರ (Radio) ಗಳು ಯಾವಾಗಲೂ ಸೇವಕರ ಮೂಲಕ ಸರಿಯಾಗಿ ಸಾಗಿಸುವ ವ್ಯವಸ್ಥೆ ಇರುವದು. ಖುರ್ಚಿ, ಮೇಜು, ಸೋಫಾಗಳು ಎಲ್ಲ ಕಡೆಗಳಲ್ಲಿ ವ್ಯವಸ್ಥೆಯಿಂದ ಇಡಲ್ಪಟ್ಟಿವೆ. ಅತಿಥಿಗಳಿಗಾಗಿ ಆರಾಮ ಖುರ್ಚಿಗಳೂ ಮೃದುಗಾದಿಯ ಪಲ್ಲಂಗಗಳೂ ಹಾಕಲ್ಪಟ್ಟಿವೆ. ಗೋಡೆಗಳ ಮೇಲೆ ಅಂದವಾದ ಚಿತ್ರಪಟಗಳು ತೂಗುಹಾಕಲ್ಪಟ್ಟಿವೆ. ಮಹಲಿನ ಮುಂದಿನ

ಅಂಗಳದಲ್ಲಿ ಗುಲಾಬಿ, ಸಂಪಿಗೆ, ಮಲ್ಲಿಗೆ ಮೊದಲಾದ ಹೂ ಗಿಡ ಬಳ್ಳಿಗಳು ಕಲಾ ಕೌಶಲ್ಯದಿಂದ ಹಚ್ಚಲ್ಪಟ್ಟವೆ. ಗಿಡಗಳ ಅಡಿಯಲ್ಲಿ ಕೂತುಕೊಳ್ಳಲುಸಂಗಮ ವರಿಕಲ್ಲಿನ ಆಸನಗಳು ನೆಡಿಸಲ್ಪಟ್ಟವೆ. ಹೂದೋಟದ ಮಧ್ಯದಲ್ಲಿ ನೀರಿನ ಕಾರಂಜಿಯು ನಿರಂತರವಾಗಿ ನೀರನ್ನು ಮೇಲಕ್ಕೆ ಚಾಮರದ ಆಕಾರದಲ್ಲಿ ಚಿಮ್ಮುತ್ತಿದೆ. ಆ ಮಹಲಿನಲ್ಲಿ ವ್ಯವಸ್ಥೆಯು ಬೇಸಿಗೆಯಲ್ಲಿ ಬಿಸಲಿನ ತಾಪವಿರದಂತೆ, ಚಳಿಗಾಲದಲ್ಲಿ ಚಳಿಯಾಗದಂತೆ, ಮಳೆಗಾಲದಲ್ಲಿ ಕೊಳೆಯಾಗದಂತೆ ಯೋಚಿಸಲ್ಪಟ್ಟತ್ತು. ಬಹಳ ವರ್ಣಿಸುವದರಿಂದೇನು, ಅದೊಂದು ಸಕಲ ಸಂಪತ್ತಿನ ಹಾಗು ಸುಖದ ಆವಾಸವೇ ಆಗಿತ್ತು.

ಈ ಮಹಲಿನ ಪಕ್ಕದಲ್ಲಿಯೇ ಒಂದು ಪ್ರಾಥಮಿಕ ಖಾಸಗಿ ಶಾಲೆಯಿತ್ತು. ಅದರ ಪೋಷಣೆಗಾಗಿ ಸದಾಶಿವರಾಯನು ಮುಕ್ಕಾಲು ಖರ್ಚನ್ನು ವಹಿಸುತ್ತಿದ್ದನು. ಅದರಲ್ಲಿ ಮರಾಠಿ ಹಾಗು ಕನ್ನಡ ಭಾಷೆಗಳನ್ನು ಕಲಿಸುವ ವ್ಯವಸ್ಥೆ ಇತ್ತು. ಶಂಕರನನ್ನು ಈ ಶಾಲೆಗೆ ಕಳುಹಲಾಯಿತು. ಇದೂ ಅಲ್ಲದೆ ಮನೆಯಲ್ಲಿ ಕಲಿಸಲು ಒಬ್ಬ ಶಿಕ್ಷಕನು ಬರುವಂತೆ ಏರ್ಪಾಡಾಯಿತು. ಶಂಕರನು ಜನ್ಮದಿಂದ ಜಾಣನಿದ್ದುದರಿಂದ ಒಂದೇ ವರ್ಷದಲ್ಲಿ ೨ನೆಯ ವರ್ಗದ ಪರೀಕ್ಷೆಗೆ ಕುಳಿತು ತೇರ್ಗಡೆ ಹೊಂದಿದನು. ಮತ್ತೊಂದು ವರ್ಷಕ್ಕೆ ೪ನೆಯ ವರ್ಗದ ಪರೀಕ್ಷೆಗೆ ಹಾಜರು ಆಗಿ ಪ್ರಥಮ ಶ್ರೇಣಿಯಲ್ಲಿ ಶ್ರೇಯಸ್ಸನ್ನು ಪಡೆದನು. ಆ ಮೇಲೆ ಶಂಕರನು ಇಂಗ್ಲಿಷ್ ಶಾಲೆಯನ್ನು ಪ್ರವೇಶಮಾಡಿದನು. ಅಲ್ಲಿಯಾದರೂ ಅವನು ಬುದ್ಧಿ ಕುಶಲತೆಯಿಂದ ಶಿಕ್ಷಕರನ್ನು ಬೆರಗುಗೊಳಿಸಿದನು. ಅವನು ಸಹಪಾಠಿಗರ ಸಂಗಡ ನಯ, ವಿನಯಪೂರ್ವಕವಾಗಿಯೂ ಪ್ರೇಮದಿಂದಲೂ ವರ್ತಿಸುವನು. ಶಿಕ್ಷಕರಿಗೆ ವಂದಿಸುವನು, ವೇಳೆ ತಪ್ಪದಂತೆ ಶಾಲೆಗೆ ಬರುವನು, ಸ್ವಚ್ಛವಾದ ಬಟ್ಟೆಗಳನ್ನು ನೀಟಾಗಿ ಧರಿಸುವನು. ಶಿಕ್ಷಕರ ಅಪ್ಪಣೆಯಿಲ್ಲದೆ ಶಾಲೆಯ ಹೊರಗೆ ಹೋಗನು. ಅವನ ಮೃದುವಾದ ನುಡಿ, ಸರಳವಾದ ವರ್ತನೆ, ಸಹಜವಾದ ಪ್ರೇಮ ಭಾವಗಳು ಎಲ್ಲರನ್ನು ಆಕರ್ಷಿಸಿದವು.

ಶಂಕರನು ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣನಾದನು. ವಿಶ್ವವಿದ್ಯಾಲಯದ ಎಲ್ಲ ವಿದ್ಯಾರ್ಥಿಗಳಲ್ಲಿ ಅವನಿಗೆ ಪ್ರಥಮ ಶ್ರೇಣಿಯು ದೊರೆಯಿತು. ಆಗ ಸದಾಶಿವರಾಯನಿಗೆ ಬಹಳ ಸಂತೋಷವೆನಿಸಿತು. ಬಡವರ ಮಗನನ್ನು ತಂದೆ ತಾಯಿಗಳಿಂದ ಅಗಲಿಸಿ ತಂದ ವ್ಯಥೆಯು ಅಳಿದು ಹೋಗಿ ತನ್ನ ಉದ್ದೇಶವು ಸಫಲವಾಯಿತೆಂದು ಹಿರಿದಾಗಿ ಹಿಗ್ಗಿದನು. ಆಗ ಸದಾಶಿವರಾಯನಿಗೆ ಅರುವತ್ತನೆಯ ವಯಸ್ಸು, ಆತನ ಹೆಂಡತಿಗೆ ನಾಲ್ವತ್ತಾರನೆಯ ವಯಸ್ಸು ಅವರಿಗೆ ಗಂಡು ಸಂತತಿಯಿರಲಿಲ್ಲ. ನಾಲ್ಕು ವರ್ಷದ ಹೆಣ್ಣು ಕೂಸು ಮಾತ್ರವಿತ್ತು. ಆದುದರಿಂದ ಅವರೀರ್ವದಂಪತಿಗಳು ಶಂಕರನನ್ನು ಮಗನಂತೆ ಪ್ರೀತಿಸ ಹತ್ತಿದರು. ಶಂಕರನು ಪರೀಕ್ಷೆ ಪಾಸಾದದ್ದನ್ನು ಆತನ ತಂದೆ ತಾಯಿಗಳಿಗೆ ತಿಳಿಸಿ ಆನಂದಪಡಿಸಬೇಕೆಂದು ಸದಾಶಿವರಾಯನಿಗೆ ಮನಸ್ಸಾಯಿತು. ಅವನು ಕೂಡಲೇ ತನ್ನ ಮೋಟಾರನ್ನು ಸಿದ್ಧಗೊಳಿಸಲು ವಾಹಕನಿಗೆ ತಿಳಿಸಿದನು. ವಾಹಕನು ಒಂದು ಘಂಟೆಯೊಳಗಾಗಿ ಸುಖವಾಸಲ ಹಳ್ಳಿಗೆ ಹೋಗಿ ಜನಾರ್ದನ—ಲಕ್ಷ್ಮಿಯರಿಗೆ ಈ ವೃತ್ತಾಂತವನ್ನು ತಿಳಿಸಿದನು. ಆಗ ಅದನ್ನು ಕೇಳಿ ಅವರ ಆನಂದಕ್ಕೆ ಮೇರೆಯೇ ಇಲ್ಲದಾಯಿತು. ಅವರನ್ನು ಕರೆದುಕೊಂಡು ಬರಬೇಕೆಂದು ಒಡೆಯನ ಆಜ್ಞೆಯಿದ್ದುದರಿಂದ ಮೋಟರ ವಾಹಕನು ಅವರನ್ನು ಮೋಟರಿನಲ್ಲಿ ಹತ್ತಿಸಿಕೊಂಡು ಪುಣೆಗೆ ಬಂದನು.

ಮೋಟರು ಮಹಲಿನ ಹತ್ತರ ‘ಭೌಂ’ ಎಂದು ಸಪ್ಪಳ ಮಾಡಿದಾಕ್ಷಣ ಶಂಕರನು ಮಹಡಿಯಿಂದಿಳಿದು ಬಂದು ತಂದೆ ತಾಯಿಗಳಿಗೆ ನಮಸ್ಕಾರ ಮಾಡಿದನು. ಆಗ ತಂದೆತಾಯಿಗಳು ಆರೇಳು ವರ್ಷಕಾಲ ಮಗನ ದರ್ಶನವಿಲ್ಲದುದರ ಮೂಲಕ ಅವನ ಮುಖಚರ್ಯೆಯಿಂದ ಅವನ ಗುರುತನ್ನು ಅರಿತುಕೊಂಡರು. ಅವನ ಉಡಿಗೆ, ನಡೆ, ನುಡಿಗಳು ಹಳ್ಳಿಯ ಹುಡುಗರಿಂದ ತೀರ ಭಿನ್ನವಾಗಿದ್ದವು, ಪಟ್ಟಣಿಗರ ನಯವಾದ ಭಾಷೆಯು ಶಂಕರನಲ್ಲಿ ನೆಲೆಗೊಂಡಿತ್ತು. ತಂದೆತಾಯಿಗಳ ಒರಟು ಭಾಷೆಯನ್ನು ಕೇಳಿ ಅವನಿಗೆ ನಗುವಂತೆನಿಸುತ್ತಿತ್ತು. ಆದರೆ ತಂದೆತಾಯಿಗಳಿಗೆ ಅಗೌರವವುಂಟಾದೀತೆಂಬ ಭಾವನೆಯಿಂದ ಅವನು

ನಗೆಯನ್ನು ನುಂಗುತ್ತಿದ್ದನು. ಶಂಕರನು ತಂದೆತಾಯಿಗಳನ್ನು ಮನೆಯೊಳಗೆ ಕರೆದೊಯ್ದು ಸದಾಶಿವರಾಯರಿಗೂ ಅವರ ಹೆಂಡತಿಗೂ ಭೆಟ್ಟಿ ಮಾಡಿಸಿದನು. ಅವರು ಶಂಕರನ ತಂದೆತಾಯಿಗಳನ್ನು ಆದರದಿಂದ ಉಪಚರಿಸಿದರು. ಶಂಕರನ ವಿದ್ಯಾಭ್ಯಾಸದ ಪ್ರಗತಿಯನ್ನೂ ಅವನ ಸದ್ಗುಣಗಳನ್ನೂ ಬಣ್ಣಿಸಿ ಅವರನ್ನು ಆನಂದಗೊಳಿಸಿದರು. ಶಂಕರನಾದರೋ ತನ್ನ ತಂದೆತಾಯಿಗಳನ್ನು ಮರೆತು ಸದಾಶಿವರಾಯನನ್ನೂ ಅವನ ಹೆಂಡತಿಯನ್ನೂ ತಂದೆತಾಯಿಗಳೆಂದು ತಿಳಿದಿದ್ದನು.

ಜನಾರ್ದನ ಲಕ್ಷ್ಮಿಯರು ಸದಾಶಿವರಾಯನ ಮಹಲಿನಲ್ಲಿ ಗೌರವದ ಅತಿಥಿಗಳಾಗಿ ಒಂದು ವಾರದ ವರೆಗೆ ಇದ್ದರು. ಅಲ್ಲಿ ಆದಂಥ ಮೃಷ್ಟಾನ್ನದೂಟವನ್ನು ಅವರು ಎಂದೂ ಕಂಡಿರಲಿಲ್ಲ. ಪ್ರತಿದಿನ ಶಂಕರನು ಅವರ ಸ್ನಾನಮಾಡಿಸಿ ಅವರ ಮಾಸಿದ ಹರಕು ಬಟ್ಟೆಗಳನ್ನು ತೆಗೆದುಹಾಕಿ ಅವರಿಗೆ ಹೊಸ ಬಟ್ಟೆಗಳನ್ನು ಉಡಿಸುವನು. ಅವರ ಪಂಕ್ತಿಯಲ್ಲಿ ಊಟ ಮಾಡುವನು. ಅವರ ಹಾಸಿಗೆಯನ್ನು ಸಿದ್ಧಗೊಳಿಸುವನು. ಮನೋಹರವಾದ ಚರಿತ್ರೆಗಳನ್ನೋದಿ ಅವರ ಮನರಂಜಿಸುವನು. ಬಾನುಲಿಯಲ್ಲಿಯ ಸಂಗೀತವನ್ನು ನುಡಿಸಿ ಅವರಿಗೆ ಕರ್ಣಾನಂದವನ್ನುಂಟು ಮಾಡುವನು. ಇಷ್ಟೆಲ್ಲ ಸುಖಗಳನ್ನು ಅನುಭೋಗಿಸಿದ ನಂತರ ಅವರು ತಮ್ಮ ಹಳ್ಳಿಯ ನೆನಪು ಮಾಡಿಕೊಂಡು ಅಲ್ಲಿಗೆ ಹೋಗಲು ಸದಾಶಿವರಾಯನ ಅಪ್ಪಣೆ ಪಡೆದುಕೊಂಡರು. ಸದಾಶಿವರಾಯನು ಅವರ ಪಯಣಕ್ಕೆ ಮೋಟಾರನ್ನು ಸಿದ್ಧಮಾಡಲು ವಾಹಕನಿಗೆ ಸೂಚಿಸಿದನು. ಹಾಗು ಅವರ ಬಡತನದ ಸ್ಥಿತಿಯನ್ನು ಹೋಗಲಾಡಿಸಲು ಗಂಡಹೆಂಡಿರಿಗೆ ಧೋತರ ಸೀರೆಗಳ ಜೋಡು, ಶಾಲು ಹಾಗು ಮನೆತನದ ಖರ್ಚಿಗಾಗಿ ಐದುನೂರು ರುಪಾಯಿಗಳ ಹುಮ್ಮಿಣಿಯೊಂದನ್ನು ಅವರಿಗೆ ಸಲ್ಲಿಸಿದನು. ಇವುಗಳನ್ನು ಸ್ವೀಕರಿಸಲು ಶಂಕರನ ತಂದೆತಾಯಿಗಳಿಗೆ ಪರಮಾನಂದವಾಯಿತು. ಆ ಮೇಲೆ ಅವರು ತಮ್ಮ ಹಳ್ಳಿಗೆ ಹೊರಡುವಾಗ ಶಂಕರನನ್ನು ಮತ್ತೆ ಅಗಲುವ ಕಳವಳದಿಂದ ಅವನಿಗೆ ಮೇಲಿಂದ ಮೇಲೆ ಮುದ್ದುಕೊಟ್ಟು, "ಅಪ್ಪಾ, ಹೋಗಿ ಬರುತ್ತೇವೆ, ನಮ್ಮನ್ನು ಮರೆಯಬೇಡ" ಎಂದು ದೈನ್ಯಸ್ವರದಿಂದ ನುಡಿದರು

ಅಷ್ಟರಲ್ಲಿ ವಾಹಕನು "ಭೌಂ" ಎಂದು ಬಾರಿಸಿ ಮೋಟಾರನ್ನು ಮುಂದೆ ಸಾಗಿಸಿದನು.

ಇತ್ತ ಶಂಕರನು ಹಡೆದ ತಂದೆತಾಯಿಗಳ ಸಹಜ ಪ್ರೇಮವನ್ನು ನೆನಸಿಕೊಂಡು ಸುಯ್ಯೆಂದು ಉಸುರುಗರೆದನು. ಆದರೆ ಪಟ್ಟಣದಲ್ಲಿರುವದರಿಂದ ತನ್ನ ಮುಂದಿನ ಪ್ರಗತಿಯುಂಟಾಗುವದೆಂಬ ಭಾವನೆಯು ಆವನಿಗೆ ಸಮಾಧಾನವನ್ನುಂಟುಮಾಡಿತು. ಅವನು ಸ್ವಲ್ಪ ದಿನಗಳಲ್ಲಿ ಕಾಲೇಜಿಗೆ ಸೇರಿದನು. ಅವನಿಗೆ ಸರಕಾರದಿಂದ ಅವನ ಪ್ರಥಮ ಶ್ರೇಣಿಯ ಯಶಸ್ಸಿಗಾಗಿ ತಿಂಗಳೊಂದಕ್ಕೆ ರೂ ೨೫ಗಳ ವಿದ್ಯಾರ್ಥಿ ವೇತನವು ದೊರಕಿತು. ಕಾಲೇಜದಲ್ಲಾದರೂ ಅವನು ಅಗಾಧವಾದ ಜ್ಞಾನವನ್ನು ತೋರಿಸಿ ಎಲ್ಲ ವಿದ್ಯಾರ್ಥಿಗಳಿಗಿಂತ ಮೇಲ್ಮೆಯನ್ನು ವ್ಯಕ್ತಗೊಳಿಸಿದನು. ಅವನು ಬರೆಯುವ ಶೈಲಿ, ವಿಷಯಗಳ ನವೀನತೆ, ವಿಚಾರಗಳ ಉದಾತ್ತ ಸ್ವರೂಪಗಳು ಪ್ರಾಧ್ಯಾಪಕರನ್ನು ಸಹ ದಂಗುಗೊಳಿಸಿದವು. ಅವನು ತನ್ನ ಹದಿನಾರನೆಯ ವಯಸ್ಸಿನಲ್ಲಿ ಬಿ. ಎ. ಪರೀಕ್ಷೆಗೆ ಹಾಜರಾಗಿ ಅದರಲ್ಲಿಯೂ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳೆಲ್ಲರಲ್ಲಿ ಪ್ರಥಮ ವರ್ಗದಲ್ಲಿ ತೇರ್ಗಡೆಹೊಂದಿದನು. ಅವನು ಬರೆದ ಪ್ರಶ್ನೋತ್ತರದ ಕಾಗದಗಳಲ್ಲಿಯ ಅಕ್ಷರಗಳು ಮುದ್ರಣದ ಅಕ್ಷರಗಳಂತೆ ಮುದ್ದಾಗಿದ್ದವು. ಅವನು ದೊರಕಿಸಿದ ಶ್ರೇಷ್ಠ ಯಶಸ್ಸಿನ ಸಲುವಾಗಿ ಎಲ್ಲ ಕಡೆಯಿಂದ ಆವನಿಗೆ ಅಭಿನಂದನೆಗಳು ಬರಹತ್ತಿದವು. ಇವನ ಜಾಣತನವು ಸರಕಾರದ ದೃಷ್ಟಿಗೆ ಬಂದುದರಿಂದ ಇವನನ್ನು ಆಯ್. ಸಿ. ಎಸ್. ಪರೀಕ್ಷೆಯ ಶಿಕ್ಷಣಕ್ಕಾಗಿ ಇಂಗ್ಲಂಡಕ್ಕೆ ಕಳುಹಲು ಸರಕಾರವು ಚುನಾಯಿಸಿತು.

ಪ್ರಕರಣ ೩

# ದುಷ್ಟ ಜಹಗಿರದಾರ

ಪೇಶ್ವೆಯವರ ಆಳಿಕೆಯ ಕಾಲದಲ್ಲಿ ಅವರ ದಂಡಿನಲ್ಲಿ ರಾಮದಾಸನೆಂಬ ಒಬ್ಬ ದಳವಾಯಿ ಇದ್ದನು. ಅವನು ಬಹು ಶೂರನೂ, ಧೈರ್ಯಶಾಲಿಯೂ ಆಗಿದ್ದನು. ಪೇಶ್ವೆಯವರು ನಡೆಯಿಸಿದ ಅನೇಕ ಕಾಳಗಗಳಲ್ಲಿ ಅವನು ಜಯವನ್ನು ದೊರಕಿಸಿ ಅನೇಕ ಪ್ರಾಂತಗಳನ್ನು ಗೆಲ್ಲುವದರಲ್ಲಿ ಮುಖ್ಯ ಭಾಗವಹಿಸಿದ್ದನು. ಅವನು ಮೂವತ್ತು ವರ್ಷಕಾಲ ದಂಡಿನಲ್ಲಿ ದುಡಿದನಂತರ ಸೇವಾನಿವೃತ್ತನಾದನು. ಅವನ ರಾಜನಿಷ್ಠೆಯ ಪ್ರತಿಫಲವಾಗಿ ಪೇಶ್ವೆ ಸರಕಾರವು ಅಹಮ್ಮದ ನಗರದ ಸಮೀಪದ ಇಪ್ಪತ್ತೈದು ಹಳ್ಳಿಗಳ ಜಹಗೀರನ್ನು ರಾಮದಾಸನಿಗೆ ದಯಪಾಲಿಸಿತು. ಈ ಜಹಾಗೀರಿನ ಜಮೀನುಗಳಿಂದ ಪ್ರತಿವರ್ಷ ಐದುಲಕ್ಷ ರೂಪಾಯಿಗಳ ಆದಾಯವು ಬರುತ್ತಿತ್ತು. ರಾಮದಾಸನ ನಂತರ ಅವನ ಮಕ್ಕಳು ಮೊಮ್ಮಕ್ಕಳು ಜಹಾಗೀರನ್ನು ಉಪಭೋಗಿಸುತ್ತ ಬಂದಿದ್ದರು. ಪ್ರಸ್ತುತ ದುರಂಧರನೆಂಬವನು ಜಹಾಗೀರಿನ ವಾರಸದಾರನಾಗಿದ್ದನು. ಈಗ ಅವನು ಇಪ್ಪತ್ತೆರಡು ವಯಸ್ಸಿನ ತರುಣನಾಗಿದ್ದನು. ಅವನ ತಂದೆಯು ಮರಣಹೊಂದಿ ಎರಡು ವರ್ಷಗಳಾಗಿದ್ದವು. ಅವನು ಮರಣದ ಸಮಯದಲ್ಲಿ ಐವತ್ತು ಲಕ್ಷ ರೂಪಾಯಿಗಳ ರೋಖ ಹಣವನ್ನು ಬ್ಯಾಂಕಿನಲ್ಲಿಟ್ಟಿದ್ದನು.

ದುರಂಧರನ ತಂದೆಯು ಮಗನನ್ನು ವಿದ್ಯಾಭ್ಯಾಸಕ್ಕಾಗಿ ಪುಣೆಯಲ್ಲಿರಿಸಿದ್ದನು. ದುರಂಧರನು ಶಾಲೆಯಲ್ಲಿ ಪ್ರಗತಿಹೊಂದಲಿಲ್ಲ. ಅಭ್ಯಾಸದಕಡೆಗೆ ಮನಸ್ಸುಹಾಕುವದರ ಬದಲು ನಾಟಕ, ಸಿನೆಮಾ, ಕುದುರೆ ಓಟದ ಪ್ರದರ್ಶನ ಮುಂತಾದ ಆಟ, ನೋಟಗಳಲ್ಲಿಯೇ ಮನಸೋತವನಾಗಿದ್ದನು. ಮೂರುಸಲ ಮ್ಯಾಟ್ರಿಕ್ ಪರೀಕ್ಷೆಗೆ ಹಾಜರ ಆಗಿ ವಿಫಲನಾಗಿದ್ದನು. ಹೀಗಾಗಿ ಶಾಲೆಗೆ ಶರಣುಹೊಡೆದು ಚೈನಿಬಾಜಿಯಲ್ಲಿಯೇ ಕೇವಲ ಕಾಲಕಳೆಯಹತ್ತಿದನು ಅವನ ತಂದೆಯು

ಪುಣೆಯಲ್ಲಿ ಒಂದು ಭವ್ಯವಾದ ಭವನವನ್ನು ಕೊಂಡಿದ್ದನು. ಇದೂ ಅಲ್ಲದೆ ಮುಂಬಯಿಯ ಮಲಬಾರ್ ಹಿಲ್‌ಸಲ್ಲಿ ಒಂದು ಭವನವನ್ನು ಕೊಂಡಿದ್ದನು. ಅವನ ಸೇವೆಗಾಗಿ ಅವನಲ್ಲಿ ೮-೧೦ ಆಳುಗಳಿದ್ದರು. ಶಾಲೆಗೆ ಹೋಗುವಾಗಲೂ ಬರುವಾಗಲೂ ಸಹ ಬ್ಯೂಕ್ ಮೋಟರ ದಲ್ಲಿಯೇ ಅವನ ಸಂಚಾರ. ದಿನಕ್ಕೆ ಮೂರು ತರದ ಹೊಸ ಉಡಿಗೆ ಗಳನ್ನು ಧರಿಸುತ್ತಿದ್ದನು. ಸವಿಯೂಟಗಳಿಗಾದರೂ ಯಾವ ಕೊರತೆಯೂ ಇರಲಿಲ್ಲ. ತಂದೆಯಿರುವವರೆಗೆ ನಿಯಮಿತವಾದ ಹಣವನ್ನು ಖರ್ಚಿಗೆ ಕಳುಹುತ್ತಿದ್ದನು. ತಂದೆಯ ಮರಣದನಂತರ ಜಹಾಗೀರಿನ ಪೂರ್ಣ ಒಡೆತನವು ಅವನ ಕೈವಶವಾದುದರಿಂದ ಅವನು ದುಂದುಗಾರಿಕೆಯ ಪ್ರವೃತ್ತಿಯುಳ್ಳವನಾದನು. ದುಡ್ಡಿನ ಬಲವು ಅವನನ್ನು ದುರ್ವ್ಯಸನಗಳಿಗೆ ಈಡುಮಾಡಿತು.

ಮನುಷ್ಯನಿಗೆ ಯೌವ್ವನಕಾಲವು ಅನೇಕ ದುಷ್ಪ್ರವೃತ್ತಿಗಳಲ್ಲಿ ದುಡುಕಿಬೀಳುವ ಕಾಲವು. ಸುಭಾಷಿತದಲ್ಲಿ ಹೇಳಿದಂತೆ,—

ಯೌವ್ವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿ ತಾ |
ಏಕೈಕ ಮನರ್ಥಾಯ ಕಿಮುಯತ್ರ ಚತುಷ್ಟಯಂ||

ಅಂದರೆ ಯೌವ್ವನ, ಧನಸಂಪತ್ತು, ಒಡೆತನ, ಅವಿವೇಕತನಗಳಲ್ಲಿ ಯಾವದಾದರೊಂದೇ ಇದ್ದಲ್ಲಿ ಅನರ್ಥವುಂಟಾಗುವದು. ಆದರೆ ಯಾವನಲ್ಲಿ ಈ ನಾಲ್ಕೂ ಅವಸ್ಥೆಗಳಿದ್ದರೆ ಏನು ಗತಿಯಾಗಬೇಕು? ದುರಂಧರನಲ್ಲಿ ಈ ನಾಲ್ಕೂ ಅವಸ್ಥೆಗಳು ಮನೆಮಾಡಿಕೊಂಡವು. ಅವನಂತಹ ದುರ್ವ್ಯಸನಿಗಳಾದ ತರುಣರು ಅವನಿಗೆ ಗೆಳೆಯರಾದರು. ಅವನು ಕುದುರೆಯ ಜಿದ್ದಿನಲ್ಲಿ ಪಣಕಟ್ಟಿ ಹೇರಳವಾದ ಹಣವನ್ನು ಕಳೆಯಹತ್ತಿದನು. ರಾತ್ರಿಯಲ್ಲೆಲ್ಲ ಇಸ್ಪಿಟ್ಟ ಆಟದಲ್ಲಿ ಕಾಲಕಳೆದು ಹಗಲಿನಲ್ಲಿ ನಿದ್ರೆಯಲ್ಲಿ ನಿರತನಾಗುತ್ತಿದ್ದನು. ಅವನಿಗೆ ರಾತ್ರಿಯು ಹಗಲಾಯಿತು. ಹಗಲು ರಾತ್ರಿಯಾಯಿತು. ಗೆಳೆಯರ ಸಹವಾಸ ದೋಷದಿಂದ ಮದ್ಯಪಾನವು ಪ್ರಾರಂಭವಾಯಿತು. ದುರಂಧರನ ತಂದೆಯು ಸಾಯುವ ಒಂದು ವರ್ಷ ಪೂರ್ವದಲ್ಲಿ ದೊಡ್ಡ ಬೇನೆಯಿಂದ

ಸರಳುತ್ತಿದ್ದನು. ಆದುದರಿಂದ ಅವನು ಮಗನ ಮದುವೆಯನ್ನು ಮಾಡಿ ಮರಣಹೊಂದಬೇಕೆಂಬ ಉದ್ದೇಶವುಳ್ಳವನಾದನು.

ಜಹಾಗೀರದಾರನಲ್ಲಿ ಸಂಪತ್ತು ಹಾಗು ಸಕಲ ವೈಭವಗಳು ನೆಲೆಸಿದ್ದರಿಂದ ಅನೇಕ ಕಡೆಗಳಿಂದ ಕೊಡುಗೆಯ ಸೂಚನೆಗಳು ಬಂದಿದ್ದವು. ಮಗನು ವಿದ್ಯಾಭ್ಯಾಸದಲ್ಲಿ ಪ್ರಗತಿಯನ್ನು ಹೊಂದದಿದ್ದರೂ ಕನ್ಯೆ ಕೊಡುವವರು ಸಂಪತ್ತಿಗೆ ಮರುಳಾಗಿದ್ದರು. ಲೌಕಿಕ ವ್ಯವಹಾರದಲ್ಲಿ ದುಡ್ಡೇ ದೊಡ್ಡಪ್ಪ. ಹಣವಿಲ್ಲದೆ ಊಟ, ಉಡಿಗೆ ಮುಂತಾದ ಜೀವಿತದ ಸುಖಶಾಂತಿಗಳು ದೊರಕಲಾರವು. ಜಗತ್ತಿನಲ್ಲಿ ಹಣಕ್ಕೆ ಮೊದಲನೆಯ ಬೆಲೆಯುಂಟು, ಅಧಿಕಾರಕ್ಕೆ ಎರಡನೆಯ ಸ್ಥಾನ, ಸೌಂದರ್ಯ ಅಥವಾ ಬೆಡಗಿನ ಪೋಷಾಕಿಗೆ ಮೂರನೆಯ ಸ್ಥಾನ, ವಿದ್ಯೆಗೆ ನಾಲ್ಕನೆಯ ಸ್ಥಾನವಿದೆ. ದುರಂಧರನಾದರೋ ರೂಪವಂತನಾಗಿರಲಿಲ್ಲ. ಆದರೆ ಐಶ್ವರ್ಯವಂತ. ಸುಖದಿಂದ ಬೆಳೆದವನು.

ದುರಂಧರನು ಕಿರಿದಾದ ನಿಲುವಿನವನು, ಸಾದುಗಪ್ಪು ಬಣ್ಣದವನು; ದೊನ್ನೆ ಮೂಗಿನವನು, ಉಬ್ಬಿದ ಹಣೆಯುಳ್ಳವನು; ದಪ್ಪವಾದ ತುಟಿಗಳುಳ್ಳವನು; ಗಂಟುಮುಖ ಮುದ್ರೆಯುಳ್ಳವನು; ಬೆಕ್ಕಿನ ಕಣ್ಣುಗಳಂತೆ ಬಿರಿನೋಟದ ಕಣ್ಣುಳ್ಳವನು. ಇಂಥ ವಿಕಾರದ ಮುಖಮುದ್ರೆಯಿಂದ ಅವನ ಹೃದಯವಾದರೂ ಕಲುಷಿತವಾಗಿರಬೇಕೆಂದು ಯಾರಾದರೂ ಊಹಿಸಬಹುದಾಗಿತ್ತು. ಸೂರತ ಪಟ್ಟಣದಲ್ಲಿ ಮಖನದಾಸನೆಂಬ ಒಬ್ಬ ಶ್ರೀಮಂತ ಗಿರಣಿಯ ಮಾಲಕನಿದ್ದನು. ಅವನಿಗೆ ಮಾಲತಿಯೆಂಬ ಪ್ರಬುದ್ಧಳಾದ ಸುಂದರ ಮಗಳಿದ್ದಳು. ಅವನು ಆ ವೇಳೆಗೆ ಅಹಮ್ಮದ ನಗರಕ್ಕೆ ತನ್ನ ಮಗಳನ್ನು ಕರೆದುಕೊಂಡು ಬಂದಿದ್ದನು ಈ ಕನ್ಯೆಯ ವಿಷಯದಲ್ಲಿ ಈ ಮೊದಲು ಸಂಧಾನವು ನಡೆದಿತ್ತು. ಜಹಾಗಿರದಾರನಿಗೆ ಬೇನೆಯುಂಟಾದುದರಿಂದ ಮಾತುಕತೆಗಾಗಿ ಸೂರತಕ್ಕೆ ಹೋಗುವದು ಶಕ್ಯವಾಗಿರಲಿಲ್ಲ. ಆದುದರಿಂದ ಮಖನದಾಸನು ಜಹಾಗಿರದಾರನ ವಿನಂತಿಯ ಮೇರೆಗೆ ಅಲ್ಲಿಗೆ ಬಂದಿದ್ದನು. ಆಗ ಅವರೀರ್ವರ ಸಂದರ್ಶನವಾದುದರಿಂದ ಹಾಗು ಕನ್ಯೆಯನ್ನು ಪ್ರತ್ಯಕ್ಷ

ನೋಡಿದುದರಿಂದ ಅವರಲ್ಲಿ ಒಡಂಬಡಿಕೆಯಾಯಿತು. ಮತ್ತು ಹದಿನೈದು ದಿವಸಗಳ ಒಂದು ಶುಭಮುಹೂರ್ತವು ಲಗ್ನದ ಸಲುವಾಗಿ ನಿರ್ಧರಿಸಲ್ಪಟ್ಟಿತು.

ಜಹಾಗಿರದಾರನು ಲಗ್ನ ಗೊತ್ತುಪಡಿಸಿದ ಸಂಗತಿಯನ್ನು ಮಗನಿಗೆ ಟಪ್ಪಾಲಿನಿಂದ ತಿಳಿಸಿದನು ಹಾಗು ಅಹಮ್ಮದ ನಗರಕ್ಕೆ ಹೊರಟು ಬರಲು ನಿರೂಪಿಸಿದನು. ದುರಂಧರನಿಗೆ ವಿದ್ಯಾವ್ಯಾಸಂಗವು ತಲೆ ಜೇನೆಯಂತೆ ಈ ಮೊದಲೇ ಒಕರಿಕೆಯನ್ನುಂಟುಮಾಡಿತ್ತು. ಲಗ್ನದ ಸಮಾಚಾರವನ್ನು ಕೇಳಿದೊಡನೆ ಅವನಿಗೆ ಪರಮಾನಂದವಾಯಿತು. ಮರುದಿನ ಅವನು ತನ್ನ ಮೋಟರಿನಿಂದ ಊರಿಗೆ ತಲುಪಿದನು. ಲಗ್ನದ ತಯಾರಿಯು ಭರದಿಂದ ನಡೆದಿತ್ತು. ಭವನದ ಮುಂಭಾಗದಲ್ಲಿ ಭವ್ಯವಾದ ಹಂದರವು ಹಾಕಲ್ಪಟ್ಟಿತು. ಆಪ್ತೇಷ್ಟ ಜನರು ಸಕಾಲಕ್ಕೆ ಸೇರಿದರು. ಸುರತದಿಂದ ಬಂದ ಬೀಗರ ಮಂಡಲಿಯನ್ನು ಆಡಂಬರದಿಂದ ಎದುರುಗೊಂಡು ಸ್ವಾಗತ ಮಾಡಲಾಯಿತು. ಮದುವೆಯು ವೈಭವದಿಂದ ನೆರವೇರಿಸಲ್ಪಟ್ಟಿತು. ಅತಿಥಿಗಳು ಸವಿಯೂಟ, ಉಡುಗೊರೆಗಳಿಂದ ಸನ್ಮಾನಿಸಲ್ಪಟ್ಟರು.

ಮದುವೆಯು ಮುಕ್ತಾಯವಾದ ಮೇಲೆ ಜಹಾಗೀರದಾರನಿಗೆ ಜೇನೆಯು ಬಲಿಯುತ್ತ ನಡೆದು ಮೂರು ತಿಂಗಳುಗಳಲ್ಲಿ ಮರಣ ಹೊಂದಿದನು. ಈ ವರೆಗೆ ಜಹಾಗೀರಿನ ವ್ಯವಸ್ಥೆಯನ್ನು ಹಾಗು ಲೆಖ್ಖಪತ್ರಗಳ ಮೇಲ್ವಿಚಾರಣೆಯನ್ನು ಹರಪ್ರಸಾದನೆಂಬ ಕಾರಭಾರಿಯು ಮಾಡುತ್ತಿದ್ದನು. ಅವನು ಸಾತ್ವಿಕನೂ, ಸೌಮ್ಯ ಸ್ವಭಾವದವನೂ ಇದ್ದನು. ಅವನು ಮಿತವ್ಯಯದಿಂದ ಜಹಗೀರಿನ ವ್ಯವಸ್ಥೆಯನ್ನು ಸಾಗಿಸುತ್ತಿದ್ದನು. ತಂದೆಯು ಸತ್ತ ನಂತರ ದುರಂಧರನ ಸ್ವೇಚ್ಛಾಚಾರಕ್ಕೆ ಆತಂಕವಿಲ್ಲದಾಯಿತು. ದುರಂಧರನು ಬ್ಯಾಂಕ ಚಕ್ಕುಗಳನ್ನು ತಿಜೋರಿಯ ಕೈಯನ್ನೂ ತನ್ನ ವಶಕ್ಕೆ ತೆಗೆದುಕೊಂಡನು. ತನ್ನ ವಿಲಾಸಕ್ಕಾಗಿ ನಿಧಿಯನ್ನು ನೀರಿನಂತೆ ವೆಚ್ಚಮಾಡಹತ್ತಿದನು. ಹೀಗೆ ಮಾಡುವದು ಉಚಿತವಲ್ಲವೆಂದು ಹರಪ್ರಸಾದನು ದುರಂಧರನಿಗೆ ಉಪದೇಶಮಾಡುತ್ತಿದ್ದರೂ ಅದು ವಿಷದಂತೆ ಅವನಿಗೆ ರುಚಿಸಲಿಲ್ಲ. ಕಾರಭಾರಿಯು ಕಣ್ಣು

ತಪ್ಪಿಸಿದರಾಯಿತು. ಎಂದು ಭಾವಿಸಿ ಅವನು ಮತ್ತೆ ಪುಣೆಯಲ್ಲಿ ವಾಸಮಾಡಹತ್ತಿದನು.

ದುರಂಧರನ ಹಳೆಯ ಗೆಳೆಯರು ಮತ್ತೆ ಅವನ ಸಂಗಡಿಗರಾದರು. ಅವನು ಆಗಾಗ್ಗೆ ಮುಂಬಯಿಗೆ ಹೋಗಿ ಕುದುರೆಯ ಜಿದ್ದುಗಳಲ್ಲಿ ಪಣಕಟ್ಟುತ್ತಿದ್ದನು. ಒಂದೇ ವರ್ಷದಲ್ಲಿ ತಂದೆಯು ಸಂಗ್ರಹಿಸಿಟ್ಟ ಅರ್ಥ ನಿಧಿಯು ಬರಿದಾಯಿತು ದುರಂಧರನ ಮುಪ್ಪಿನ ತಾಯಿಯು ಮಗನ ಹಾಗು ಸೊಸೆಯ ಹತ್ತರ ಇರಹತ್ತಿದಳು. ದುರಂಧರನು ಗಾಯನ, ನರ್ತನ, ಪರಸ್ತ್ರೀಸಂಗದ ವ್ಯಸನಗಳಲ್ಲಿ ಆಸಕ್ತನಾಗಿ ಹೆಂಡತಿಯಲ್ಲಿ ಸಹ ತಾತ್ಸಾರವುಳ್ಳವನಾದನು. ಅವನ ತಾಯಿಯು ಅವನ ವರ್ತನೆಯನ್ನು ಅರಿತುಕೊಂಡು ಅವನಿಗೆ ಬುದ್ಧಿ ಹೇಳಿ ಹೇಳಿ ಬೇಸತ್ತಳು. ಹೆಂಡತಿಯು ಅಂತರಂಗದಲ್ಲಿ ಕೊರಗಿ ಕಡ್ಡಿಯಂತಾದಳು. ಮೋಹ ಜಾಲದಲ್ಲಿ ಸಿಲುಕಿದವನಿಗೆ, ದುರ್ವ್ಯಸನಗಳಲ್ಲಿ ದುಡುಕಿದವನಿಗೆ ಯಾವದರ ಪರಿವೆ, ಎಲ್ಲಿಯ ಎಚ್ಚರ! ಅಜ್ಞಾನದ ಅಂಧಕಾರದಲ್ಲಿ ವಿಷಯ ವಾಸನೆಯ ಮದದಲ್ಲಿ ಮಗ್ನನಾದವನಿಗೆ ಆತ್ಮದ ಕೇಡಿನ ವಿಚಾರವು ತಲೆದೋರುವದೇ ಇಲ್ಲ.

ದುರಂಧರನ ದುರ್ವ್ಯಸನಗಳು ದಿನದಿನಕ್ಕೆ ಹೆಚ್ಚಾಗುತ್ತಾ ನಡೆದವು. ಹೆಂಡತಿಯನ್ನು ಅವನು ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಅವಳಲ್ಲಿ ಸೌಂದರ್ಯವಾಗಲಿ, ಸದ್ಗುಣಗಳಾಗಲಿ, ಪತಿಭಕ್ತಿಯಾಗಲಿ ಕಡಿಮೆಯಾಗಿರಲಿಲ್ಲ. ಆದರೆ ಮಿಥ್ಯಾಸುಖಕ್ಕೆ ಮನವೆಳಸಿದವನಿಗೆ ಮನೆಯ ಸುಖವು ಹೇಗೆ ರುಚಿಸೀತು? ಅವನು ಹೆಂಡತಿಯ ಸಂಪರ್ಕವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟನು. ಮಾಲತಿಯು ತನ್ನನ್ನು ಈ ರೀತಿಯಿಂದ ಅನಾದರ ಮಾಡಿದ ಪತಿಯ ಮೂಲಕ ದುಃಖಿತಳಾಗಿ ಹಾಸಿಗೆ ಹಿಡಿದಳು. ಊಟ, ಉಡಿಗೆಗಳಲ್ಲಿ ಸಹ ಅನಾಸಕ್ತಳಾದಳು. ಅವಳ ಆರೋಗ್ಯವು ಕುಂದಿತು. ಜೀವವು ಬೇಸರವೆನಿಸಿತು.

ದುರಂಧರನ ಸೇವಕರಲ್ಲಿ ಕಮಾಲನೆಂಬವನು ಅವನ ಸದಾಕಾಲದ ಸಂಗಡಿಗನಾಗಿದ್ದನು. ಈತನೂ ಬಹಳ ದುಷ್ಟನಾಗಿದ್ದನು. ಈತನು ಮಧ್ಯವಯಸ್ಕನು, ಸ್ಥೂಲ ದೇಹವುಳ್ಳವನು. ಗಿಳಿಯ ಮೂಗಿ

ನಂತೆ ಡೊಂಕಾದ ಮೂಗುಳ್ಳವನು, ಬಾಯಿಯು ಎಷ್ಟು ಅಗಲವಾಗಿ ತ್ತೆಂದರೆ ಬಾಯಿಗೂ ಕಿವಿಗಳಿಗೂ ಒಂದೇ ಅಂಗುಲ ಅಂತರವಿತ್ತು. ಈತನ ಕಿವಿಗಳು ಆನೆಯ ಕಿವಿಗಳಂತೆ ಜೋತಾಡುತ್ತಿದ್ದವು, ಹೊಟ್ಟೆಯು ಹತ್ತಿಯ ಅಂಡಿಗೆಯಂತೆ ಮುಂದೆ ಚಾಚಿತ್ತು; ಕಾಲುಗಳು ಕಿರಿದಾಗಿಯೂ, ಊದುಬತ್ತಿಗಳಂತೆ ತೆಳುವಾಗಿಯೂ ಇದ್ದವು; ಎಡಗೈಯು ಯಾವದೋ ಕಾರಣದಿಂದ ಉದುರಿಹೋಗಿತ್ತು. ತಲೆಯು ಬೋರ್ಗಲ್ಲಿನಂತೆ ಉಬ್ಬಾಗಿತ್ತು ಮತ್ತು ಕೂದಲಿಲ್ಲದೆ ಕಂಚಿನ ಕೊಡದಂತೆ ಮಿಂಚುತ್ತಿತ್ತು. ಬಲಭಾಗದ ಮೀಸೆಯನ್ನು ಹುಳಗಳು ತಿಂದದ್ದರಿಂದ ಎಡಭಾಗದ ಮೀಸೆಯೊಂದೇ ಮುಖದ ಮೇಲಿತ್ತು. ಮೈಬಣ್ಣವು ಕಲ್ಲಿದ್ದಲಿಗಿಂತ ಕಪ್ಪಾಗಿತ್ತು. ಅವನನ್ನು ನೋಡಿ ಹೆದರಿದ ಹುಡುಗರನ್ನು ನಂತರ ಮಂತ್ರೋಪಾಯಗಳಿಂದ ಗುಣಪಡಿಸಬೇಕಾಗುತ್ತಿತ್ತು. ಅವನಲ್ಲಿ ನೀತಿ, ನ್ಯಾಯ, ಸತ್ಯ, ಪ್ರಾಮಾಣಿಕತನಗಳ ಕಲ್ಪನೆಗಳೇ ಇರಲಿಲ್ಲ. ಹೃದಯವು ಕಮ್ಮಾರನ ಕುಲುಮೆಯಂತೆ ಕೆಂಡಮಯವಾಗಿತ್ತು. ಅವನು ಮಾಡದ ದುಷ್ಟತನಗಳು ಒಂದೂ ಉಳಿದಿರಲಿಲ್ಲ. ಪಶುಹತ್ಯ, ಶಿಶುಹತ್ಯ, ಸ್ತ್ರೀಹತ್ಯ, ವ್ಯಭಿಚಾರ, ಕಳವು, ವಿಶ್ವಾಸಘಾತ, ಮೋಸಗಳು ಅವನ ಸಹಜಕೃತಿಗಳಾಗಿದ್ದವು. ಅವನು ಕುರೂಪಿಯಾದುದರಿಂದ ಅವನ ಸಂಗಡ ಮದುವೆಮಾಡಿಕೊಳ್ಳಲು ಯಾವ ಕನ್ಯೆಯೂ ಒಪ್ಪಿರಲಿಲ್ಲ. ಜಾರಸ್ತ್ರೀಯರಲ್ಲಿಯೇ ಅವನ ಸಹವಾಸವಿದ್ದುದರಿಂದ ಅವನು ಬಳಸಿದ ಬ್ರಹ್ಮಚಾರಿಯಾಗಿದ್ದನು.

ಕಮಾಲನು ದುರಂಧರನ ದುಷ್ಟಕೃತಿಗಳಲ್ಲಿ ಮುಖ್ಯ ಸಹಾಯಕನಾಗಿದ್ದನು. ಅವನು ದುರಂಧರನನ್ನು ವೇಶ್ಯೆಯರ, ನರ್ತಕಿಯರ ಮನೆಗಳಿಗೆ, ಚಹಾ, ಸರಾಯಿ ಅಂಗಡಿಗಳಿಗೆ, ಜಿದ್ದಿನ ಮತ್ತು ಹೆಡ್ಡದ ಆಟಗಳ ಅಂತರಂಗ ಸ್ಥಳಗಳಿಗೆ ಕರೆದುಕೊಂಡು ಹೋಗುವನು; ಪತಿವ್ರತೆಯರಾದ ಪರನಾರಿಯರನ್ನು ಭಂಗಪಡಿಸಲು ಹೊಂಚು ಹಾಕುವನು. ದುಷ್ಟಜನರ ಮೇಳವನ್ನು ಕೂಡಿಕೊಂಡು ರಾತ್ರಿಯಲ್ಲಿ ಕಳವು ಕೊಲೆಗಳನ್ನು ಕನಿಕರವಿಲ್ಲದೆ ಮಾಡುವನು. ಇಂಥ ಅಪರಾಧಗಳನ್ನು ಮಾಡಿ ಅವನು ಹದಿನೈದುಸಾರೆ ಸೆರೆಮನೆಯನ್ನು ಕಂಡಿದ್ದನು.

ಅವನು ಮಾಡಿದ ಎಷ್ಟೋ ಅಪರಾಧಗಳಿಗಾಗಿ ಜನರು ಅವನನ್ನು ನ್ಯಾಯಾಲಯಕ್ಕೆಳೆಯದೆ ತಾವೇ ಚಬಕದಿಂದ ಮತ್ತು ಬೆತ್ತಗಳಿಂದ ಹೊಡೆದು ಅವನ ಮೈಮೇಲೆ ಬಾಸಾಳಗಳ ಬರೆಗಳುಳಿಯುವಂತೆ ಮಾಡಿದ್ದರು. ಅವನು ಬಟ್ಟೆಗಳನ್ನು ಕಳಚಿಹಾಕಿದಾಗ ಅವನ ದೇಹವೆಲ್ಲ ಹುಲಿಯ ಆಕಾರದಂತೆ ತೋರುತ್ತಿತ್ತು.

### ಪ್ರಕರಣ ೪

## ಸುಖವಿಲಾಸದ ಪರಮಾವಧಿ

ವ್ಯಸನಗಳಿಗೆ ವಶನಾದವನು ಇಂದ್ರಿಯಗಳ ಕೈಸೆರೆಯಲ್ಲಿಯ ದಾಸನಾಗುವನು. ಅವನ ಬುದ್ಧಿಯು ಮುಸಣಿಸುವದು. ವಿವೇಕದ ಮೇಲೆ ಅಜ್ಞಾನದ ಕತ್ತಲೆಯು ಕವಿಯುವದು. ನೀತಿ, ಅನೀತಿ, ನ್ಯಾಯ, ಅನ್ಯಾಯಗಳ ತಾರತಮ್ಯ ವಿಚಾರವು ಅಳಿದುಹೋಗುವದು. ಸುಖದ ಲಾಲಸೆಯೊಂದೇ ಮನಸ್ಸಿನಲ್ಲಿ ಮುಖ್ಯವಾಗಿ ನೆಲೆಸುವದು. ಆಗ ಮನುಷ್ಯಸ್ವಭಾವವು ಅಳಿದುಹೋಗಿ ಪಶುವಿನಂತೆ ಹಸಿವು, ನೀರಡಿಕೆ, ಇಂದ್ರಿಯ ಸುಖಗಳನ್ನು ಮಾತ್ರ ತೃಪ್ತಿಗೊಳಿಸಲು ಭಾವನೆಗಳ ಪ್ರಚೋದನೆಯಿಂದ ಕುರುಡನಂತೆ ವರ್ತಿಸುವನು. ಕುರುಡನಿಗೆ ಸರ್ವ ವಸ್ತುಗಳು ಶೂನ್ಯವಾಗಿರುವಂತೆ ಕಾಮಾಂಧನಿಗೆ ಗೌರವ, ಶೀಲ, ಸತ್ಯ, ನ್ಯಾಯ ವಿಚಾರಗಳು ಶೂನ್ಯವಾಗುವವು.

ದುರಂಧರನು ದಿನದಿನಕ್ಕೆ ದುರ್ವ್ಯಸನಗಳ ಮಡುವಿನಲ್ಲಿ ಮುಳುಗುತ್ತ ನಡೆದನು. ಅವನಿಗೆ ಸುಖವಿಲಾಸದ ಸಲುವಾಗಿ ದುಡ್ಡಿನ ಕೊರತೆಯಿರಲಿಲ್ಲ. ದುರ್ಜನರ ಸಹಾಯದ ಅಭಾವವಿರಲಿಲ್ಲ. ಇಷ್ಟರ ಮೇಲೂ ಅವನಿಗೆ ಬೇಕಾದದ್ದನ್ನು ಒದಗಿಸಿಕೊಡುವ ದುಷ್ಟಬುದ್ಧಿಯ ಕಮಾಲನು ಅವನ ಕೈಪಾಡಿನ ಸೇವಕನಾಗಿದ್ದನು. ಕಮಾಲನು ಒಂದು ದಿನ ರಾತ್ರಿ ನರ್ತನದ ಸಮಾರಂಭವನ್ನು ದುರಂಧರನ ಮಹಡಿಯ

ಮೇಲೆಯೇ ಏರ್ಪಡಿಸಿದನು. ದುರಂಧರನು ತನ್ನ ಸ್ನೇಹಿತರನ್ನು ಕರೆಯಿಸಿ ಕೊಂಡನು. ಕಮಾಲನು ತನ್ನ ತುಂಟರ ಮೇಳವನ್ನೂ ಸಹ ಬರಮಾಡಿ ಕೊಂಡನು. ಮೊದಲು ರಾತ್ರಿಯ ಹತ್ತು ಘಂಟೆಗೆ ಊಟದ ಸಮಾರಂಭ ಜರಗಿತು. ನರ್ತಕಿಯರ ಸಂಗಡ ಒಂದೇ ಪಂಕ್ತಿಯಲ್ಲಿ ಎಲ್ಲರೂ ಅನೇಕ ಪಕ್ವಾನ್ನಗಳನ್ನು ಯಥೇಚ್ಛವಾಗಿ ಊಟ ಮಾಡಿದರು. ಕಮಾಲನಂತೂ ಹತ್ತು ಜನರು ಉಣ್ಣುವಷ್ಟು ಉಂಡನು. ಈ ಮೊದಲೇ ಇದ್ದ ಅವನ ಬೊಜ್ಜು ಹೊಟ್ಟೆಯು ಬಂಡೆಗಲ್ಲಿನಂತೆ ಬಿರುಸಾಯಿತು. ಅವನು ತೊಟ್ಟುಕೊಂಡ ನಿಲುವಂಗಿಯು ಬಲಿತ ಹೊಟ್ಟೆಯ ಬಿಗುವನ್ನು ತಾಳ ಲಾರದೆ ಪರ್‍ರನೆ ಹರಿದುಹೋಯಿತು. ಖಂಡುಗದಷ್ಟು ಕಬಳವನ್ನು ತಿಂದದ್ದರಿಂದ ಅವನು ಬಿಡ ಹತ್ತಿದ ಅಧೋವಾಯುಗಳು ಗುಡುಗಿನಂತೆ ಗರ್ಜನೆ ಮಾಡಹತ್ತಿದವು. ಮಳೆಗಾಲದ ಮೋಡಗಳಿಲ್ಲದೆ ಗುಡುಗು ಗಳು ಹೇಗೆ ಹುಟ್ಟಿದವೆಂದು ಮಹಲಿನ ನೆರೆಹೊರೆಯವರಿಗೆ ಅಚ್ಚರಿ ಯನ್ನುಂಟುಮಾಡಿತು. ನರ್ತಕಿಯರಿಗೆ ಕಮಾಲನ ಕೃತಿ ಮತ್ತು ಕರಾಳ ಆಕಾರವು ನಗೆಯ ಹಬ್ಬವನ್ನೇ ಉಂಟುಮಾಡಿದವು.

ನರ್ತಕಿಯರ ಮೇಳವು ಹದಿನೈದು ಜನರ ಸಮೂಹವಾಗಿತ್ತು. ಹತ್ತು ಮಂದಿ ತರುಣಿಯರು ನರ್ತನ ವಿದ್ಯೆಯಲ್ಲಿ ನುರಿತವರಾಗಿದ್ದರು ಮಧುರ ಕಂಠದವರು, ಇಂಪಾದ ಸಂಗೀತ ಕಲಾವಿದರು, ರೂಪ ಲಾವ ಣ್ಯಗಳಲ್ಲಿ ರಂಭಾ, ಊರ್ವಸಿ ಮುಂತಾದ ದೇವ ಕನ್ನಿಕೆಯರಿಗೆ ಸರಿ ಸಮಾನರು; ಮುಖಚರ್ಯೆಯ ಮಾಟದಲ್ಲಿ ಕಮಲವನ್ನು ಮೀರಿಸು ವಂಥವರು. ಬಣ್ಣದಲ್ಲಿ ಬಂಗಾರ, ಗುಲಾಬಿ, ಸಂಪಿಗೆ, ಮಲ್ಲಿಗೆ, ಜಾಜಿ ಪುಷ್ಪಗಳ ಬಣ್ಣವನ್ನು ಹೀಯಾಳಿಸುವಂಥವರು; ಹಾವಭಾವಗಳಲ್ಲಿ ಮುನಿಗಳನ್ನೂ ದೇವತೆಗಳನ್ನೂ ಮರುಳು ಮಾಡುವಂಥವರು. ಅವರು ಕಾಶ್ಮೀರ ದೇಶದ ವಂಶಸ್ಥರು. ನರ್ತನ ಪ್ರದರ್ಶನಕ್ಕಾಗಿ ದೇಶಾಂತರ ಪ್ರವಾಸ ಹೊರಟವರು, ಸಾರಂಗಿ, ಮೃದಂಗ, ವೀಣಾ, ಪಿಟಲು, ಪಿಯಾನು ಮುಂತಾದ ವಾದ್ಯಗಳಿಂದ ಸಮೇತರಾದವರಿದ್ದರು. ನರ್ತ ಕಿಯರು ಮೊದಲು ಪಂಚವಾದ್ಯಗಳನ್ನು ನುಡಿಸ ಹತ್ತಿದರು. ಅವುಗಳ ಸುಮೇಳವಾದ ಧ್ವನಿಯು ಕೇಳುವವರ ಚಿತ್ತವನ್ನು ಸೆಳೆಯುತ್ತಿತ್ತು.

ಕೆಲ ಹೊತ್ತಿನ ಮೇಲೆ ಒಬ್ಬೊಬ್ಬ ನರ್ತಕಿಯು ಹಾವಭಾವಗಳೊಂದಿಗೆ ಕುಣಿಯಲಾರಂಭಿಸಿದಳು. ಕಾಮಪ್ರೇರಿತನಾದ ದುರಂಧರನು ಮೃದು ಗಾದಿಯಿಂದ ಮೇಲಕ್ಕೆದ್ದು ನರ್ತಕಿಯನ್ನು ಗಾಢವಾಗಿ ಅಪ್ಪಿಕೊಳ್ಳು ವನು. ಅವನ ಸೇವಕ ಸಮೂಹವು ಕ್ಷಣ ಕ್ಷಣಕ್ಕೆ ಸೆರೆಯ ಸೀಸೆಗ ಳನ್ನೊಡೆದು ಸಭಿಕರಿಗೆ ಪಾನಮಾಡಿಸುವದು. ಯಥೇಚ್ಛ ಭೋಜನ ಉಂಡಂಥವರು, ಗಾಯನದ ಗುಂಗಿನಲ್ಲಿ ನಿರತರಾದವರು; ಇದರ ಮೇಲೂ ಸುಂದರ ನರ್ತಕಿಯರ ಸೊಬಗಿನ ನಾಟ್ಯದ ಮಬ್ಬಿನಲ್ಲಿ ಮಗ್ನರಾದವರು ಸೆರೆ ಕುಡಿದ ಮೇಲೆ ಕೇಳುವದೇನು, ಕೋತಿಗಳಿಗೆ ಸೆರೆ ಕುಡಿಸಿ ಕತ್ತಲೆ ಕೋಣೆಯಲ್ಲಿ ಹಾಕಿದಂತಾಯಿತು.

ನರ್ತನವು ನಡೆದ ಮಹಡಿಯು ಮಹಾ ಭವ್ಯವಾದದ್ದು. ಗೋಡೆ ಗಳ ಮೇಲೆ ಸುಂದರವಾದ ಚಿತ್ರಪಟಗಳು ತಗಲಿಕೊಂಡಿದ್ದವು. ಸಂಗ ಮವರಿ ಕಲ್ಲಿನ ನೆಲದ ಮೇಲೆ ಅಂದವಾದ ನಕ್ಷೆಗಳುಳ್ಳ ರತ್ನಗಂಬಳಿ ಗಳೂ, ಗೋಡೆಗಳ ಪಕ್ಕದಲ್ಲಿ ಗಾದಿ, ಲೋಡು, ಸೋಫಾ, ಪಲ್ಲಂಗ: ಕುರ್ಚಿ, ಮೇಜುಗಳು ವ್ಯವಸ್ಥೆಯಿಂದ ಇಡಲ್ಪಟ್ಟಿದ್ದವು. ಗಾಜಿನ ತರ ತರದ ಝುಮರುಗಳೂ, ವಿದ್ಯುಲ್ಲತೆಯ ದೀಪದ ಬುಡ್ಡಿಗಳೂ ಝುಗ್ಗೆಂದು ಹೊಳೆಯುತ್ತ ತೂಗಾಡುತ್ತಿದ್ದವು. ಇಂಥ ಪ್ರಸಂಗದಲ್ಲಿ ನರ್ತಕಿಯರ ಲಾವಣ್ಯದ ನೋಟವು; ಅವರ ಗಾಯನ, ನರ್ತನಗಳ ಮಾಧು ರ್ಯವು ಸಭಿಕರನ್ನು ಮಾಯಾಜಾಲದಲ್ಲಿ ಮುಳುಗಿಸುವದು ಸೋಜಿ ಗದ ಸಂಗತಿಯಾಗಿರಲಿಲ್ಲ. ದುರಂಧರನೂ, ಅವನ ಗೆಳೆಯರೂ ಕಾಮ ವಿಕಾರದ ಕತ್ತಲೆಯಿಂದ, ಮದ್ಯಪಾನದ ಮಬ್ಬಿನಿಂದ ಸಂಪೂರ್ಣವಾಗಿ ಇಂದ್ರಿಯಗಳ ಪರವಶರಾದರು.

ಅವರು ಈ ದುರವಸ್ಥೆಯಲ್ಲಿ ಸಿಲುಕಿದಾಗ ನರ್ತಕಿಯರ ಮೂರ ನೆಯ ಪ್ರದರ್ಶನವು ಅಂದರೆ ಸಾಮೂಹಿಕ ನಾಟ್ಯವು ಪ್ರಾರಂಭವಾ ಯಿತು. ನರ್ತಕಿಯರು ಕಾಲಲ್ಲಿ ಗೆಜ್ಜೆಗಳನ್ನು ಕಟ್ಟಿಕೊಂಡರು, ತೆಳು ವಾದ ಸೀರೆಗಳನ್ನುಟ್ಟುಕೊಂಡರು; ಪರಸ್ಪರ ಕೈಯಲ್ಲಿ ಕೈ ಹಾಕಿ ವರ್ತು ಳಾಕಾರವಾಗಿ ತಿರುಗಹತ್ತಿದರು. ಒಮ್ಮೆ ಕೈಗಳನ್ನು ಎಲ್ಲರೂ ಮೇಲಕ್ಕೆ ತ್ತುತ್ತಲೂ ಒಮ್ಮೆ ಕೆಳಗಿಳುಹುತ್ತಲೂ, ಕುತ್ತಿಗೆಗಳನ್ನು ಹೊರಳಿಸುತ್ತಲೂ

ತಲೆಗಳನ್ನು ಬಾಗಿಸುತ್ತಲೂ, ಟೊಂಕಗಳನ್ನು ಡೊಂಕು ಮಾಡುತ್ತಲೂ ಕಾಲುಗಳನ್ನು ಮಣಿಸುತ್ತಲೂ ಅಂದವಾಗಿ ಕುಣಿಯಹತ್ತಿದರು. ನಾಟ್ಯದ ಜೊತೆಗೆ ಮಧುರವಾದ ಗಾಯನಗಳನ್ನೂ ಪ್ರಾರಂಭಿಸಿದರು. ಅವರ ತಾಳಮೇಳದ ಕುಣಿತಕ್ಕೆ ಮನಸೋತ ದುಂರಧರನೂ ಅವನ ಗೆಳೆಯರೂ ಚಪ್ಪಾಳೆ ಬಾರಿಸುತ್ತ, 'ಭಲೆ ಶಹಬಾಷ್, ವಾಹವ್ವಾ' ಎಂದು ಮರುಳಿನ ಮಾಯದಲ್ಲಿ ತಮ್ಮನ್ನೇ ಮರೆತರು. ಅವರು ಮದ್ಯಪಾನದ ಮದದಿಂದ ಸ್ಮರಣೆಗೆಟ್ಟವರಾದುದರಿಂದ ತಾವೂ ಕುಣಿಯಲಾರಂಭಿಸಿದರು. ಅಷ್ಟಕ್ಕೆ ತೃಪ್ತರಾಗದೆ ನರ್ತಕಿಯರ ಮೇಳದಲ್ಲಿ ಬೆರೆತು ನರ್ತಕಿಯರ ಕೈ ಹಿಡಿದುಕೊಂಡು ಕುಣಿಯಹತ್ತಿದರು. ಅಮಲಿನ ಪರಿಣಾಮದಿಂದ ದೇಹದ ಸ್ವಾಧೀನವಿಲ್ಲದವರಾಗಿ ನೆಲಕ್ಕೆ ಧೊಪ್ಪನೆ ಬೀಳುವರು, ತೊದಲು ಮಾತುಗಳನ್ನಾಡುವರು.

ಕಮಾಲನಂತೂ ಮೊಹರಮ್ಮದ ಹುಲಿಯಂತೆ ಹದಗೆಟ್ಟು ಕುಣಿಯುತ್ತಿದ್ದನು. ಮದ್ಯಪಾನದ ಗುಂಗಿನಲ್ಲಿ ತಾನೂ ಉಳಿದವರಂತೆ ನರ್ತಕಿಯರನ್ನು ಆಲಿಂಗಿಸಲಿಚ್ಛಿಸಿದನು. ಅವನು ಒಬ್ಬ ನರ್ತಕಿಯನ್ನು ಆಲಿಂಗಿಸಲು ಅವಳು ಅವನ ಅಸಡ್ಡಾಳ ಮೋರೆಯನ್ನು ಕಂಡು ಹೇಸಿಕೊಂಡು ಅವನ ಹೊಟ್ಟೆಗೆ ಕಾಲಿನಿಂದ ಒದ್ದಳು. ಆಗ ಅವನು ಹಳೆಯ ಮರವು ಉರುಳಿಬಿದ್ದಂತೆ ನೆಲಕ್ಕೆ ಧೊಪ್ಪನೆ ಬಿದ್ದನು. ಅವನು ತಿಂದ ಖಂಡುಗ ಕರಿಗಡಬುಗಳು ಗಂಟಲಿನಿಂದ ಬಳಬಳ ಉದುರಿದವು. ನರ್ತಕಿಯರು ಮದಿಸಿದ ಮತ್ತು ವಿವೇಕಶೂನ್ಯರಾದ ಅವರನ್ನು ಕಂಡು ಹೀಗೆ ಹಾಡತೊಡಗಿದರು:—

ತಾರುಣ್ಯದ ಮದ ಮುಸುಕಿರಲು |
ಹರ ಗುರು ಸ್ಮರಣೆಯು ಎಲ್ಲಿಹುದು? |
ಉರಿಯುವ ದೀಪದ ಜ್ವಾಲೆಯೊಳು |
ಎರಗುವ ಪತಂಗದಂತೆ ಮರಣಕೆ ಗುರಿಯಾಗುವರು ||

ಈ ವೇಳೆಗೆ ದುರಂಧರ ಮೊದಲಾದವರೆಲ್ಲರು ಸಂಪೂರ್ಣ ಸ್ಮೃತಿ ತಪ್ಪಿದವರಾಗಿದ್ದರು.

ಈ ನಾಟ್ಯವು ನಡೆದ ಕ್ಷಣದಿಂದ ಎಲ್ಲ ನೋಟಗಳನ್ನು ದುರಂಧರನ ಹೆಂಡತಿಯು ಕಿಟಕಿಯ ಮರೆಯಲ್ಲಿ ಕುಳಿತುಕೊಂಡು ನೋಡುತ್ತಿದ್ದಳು. ಗಂಡನ ಅನಾಚಾರದ ವರ್ತನೆಯು ಅವಳಿಗೆ ಓಕರಿಕೆಯನ್ನುಂಟು ಮಾಡಿತು. ಈ ಮೊದಲು ಅವಳು ಗಂಡನಿಗೆ ಅನೇಕಸಲ ವಿನಯದಿಂದ ವಿವೇಕ ಹೇಳಿದ್ದಳು. ಅದಕ್ಕೆ ಅವನು ಅವಳನ್ನು ಆಗಾಗ್ಗೆ ಕ್ರೂರತನ ದಿಂದ ಹೊಡೆದು ಬಡೆದು ಶಿಕ್ಷಿಸಿದ್ದನು ತನಗೆ ಆವಳು ಬುದ್ಧಿಯನ್ನು ಕಲಿಸಬಂದಳೆಂಬ ಸಿಟ್ಟಿನಿಂದ ಅವಳ ಸಂಗ ಸಹವಾಸವನ್ನೂ ಸಂಪೂರ್ಣ ವಾಗಿ ಬಿಟ್ಟಿದ್ದನು. ದುರಂಧರನ ಆಪ್ತೇಷ್ಟರು ಅವನಿಗೆ ಉಪದೇಶ ಮಾಡಿ ಬೇಸತ್ತು ವಿಫಲರಾಗಿದ್ದರು. ಆದುದರಿಂದ ಅವಳು ನಿರಾಶ ಳಾಗಿ ತನ್ನ ಭವಿಷ್ಯ ಸುಖದ ಆಶಾಕಿರಣವೇ ಕಾಣುವದು ಸಾಧ್ಯವಿಲ್ಲವೆಂದು ಬಗೆದಳು. ಗಂಡನು ಹೆಂಡತಿಯೊಡನೆ ಸಹಕಾರ, ಪ್ರೇಮಗಳಿಂದ ವರ್ತಿಸದಿದ್ದರೆ, ಸತಿವ್ರತನಾಗಿರದಿದ್ದರೆ, ಹೆಂಡ ತಿಗೆ ಅನ್ನವಸ್ತ್ರಗಳನ್ನು ಒದಗಿಸಿ ಕೊಡದಿದ್ದರೆ, ಹೆಂಡತಿಯನ್ನು ಕ್ರೂರ ತನದಿಂದ ನಡೆಯಿಸಿಕೊಂಡರೆ ಹೆಂಡತಿಯ ಬಾಳು ಹಾಳಲ್ಲವೇ? ಹಾಗೆಯೇ ಹೆಂಡತಿಯು ಜಾರೆಯೂ,ಕ್ರೂರಳೂ,ಪತಿವ್ರತೆಯಲ್ಲವದಳೂ, ಕಟುರೋಕ್ತಿಯುವಳೂ, ಪತಿಯಲ್ಲಿ ಅನಾದರವುಳ್ಳವಳೂ ಆದರೆ ಗಂಡನಿಗೆ ಯಾವ ಸುಖವು ಸಿಗುವದು? ಇಂಥವನ ಮನೆಯು ಸ್ಮಶಾನದಂತೆಯೂ, ಮರುಭೂಮಿಯಂತೆಯೂ, ನರಕ ವಾಸದಂತೆಯೂ ತೋರುವದು.

ನಿಜವಾಗಿ ನೋಡಿದರೆ ಸಂಸಾರದಲ್ಲಿ ಸುಖವು ಸ್ವಲ್ಪ, ದುಃಖವು ಅಪಾರ. ಕೂಸು ಪ್ರೌಢವಾಗುವ ವರೆಗೆ ಕೇವಲ ತಾಯಿತಂದೆಗಳ ರಕ್ಷಣೆಯ ಮೇಲೆ ಅವಲಂಬಿಸಿರುವದು, ರೋಗರುಜೆಗಳ ಬಾಧೆಗೆ ಸಿಲುಕಿ ನರಳುವದು. ಪ್ರೌಢನಾದ ಮೇಲೆ ಹೊಟ್ಟೆಹೊರೆಯುವದಕ್ಕಾಗಿ ಕಷ್ಟದ ದುಡಿಮೆ; ಹೆಂಡರು ಮಕ್ಕಳ ರಕ್ಷಣೆಯ ಚಿಂತೆ, ಆಗಾಗ್ಗೆ ಬರುವ ಆಪತ್ತು ವಿಪತ್ತುಗಳ ಸಂಕಟ; ಪಾಲು ಬೇಡುವ ಅಣ್ಣತಮ್ಮಂದಿರ ಮತ್ಸರ, ನೆರೆಹೊರೆಯವರು ತನ್ನ ಏಳಿಗೆಯನ್ನು ಸಹಿಸದೆ ವ್ಯಕ್ತಪಡಿ ಸುವ ಅಸೂಯೆ ಮತ್ತು ವ್ಯವಹಾರದಲ್ಲಿ ತಂದೊಡ್ಡುವ ತೊಡಕಿನಿಂದಾ ಗುವ ಸಂತಾಪ; ಸಮಾಜದಲ್ಲಿ ಯಾವದೊಂದು ರೀತಿಯಲ್ಲಿ ನಡೆದರೂ

ಜನರಿಂದ ಬರುವ ಅಪವಾದ; ನಿಷ್ಕಾರಣವಾದ ವೈರಿಗಳನ್ನು ಪ್ರತಿಭಟಿಸಲು ಜಾಗ್ರತನಾಗಿರುವದೊಂದು ನಿರಂತರವಾದ ಮನೋವೇದನೆ; ಹಣಗಳಿಸುವ ಹವ್ಯಾಸವು ನಿದ್ರೆ ನೀರಡಿಕೆಗಳಿಲ್ಲದಂತೆ ಮಾಡುವ ಪಿಶಾಚವೃತ್ತಿ; ಹೆಣ್ಣಿಗಾಗಿ ಹೆಣಗಾಡುವ ಮಿಥ್ಯಾಮೋಹ; ಇಂದ್ರಿಯ ನಿಗ್ರಹವಿಲ್ಲದೆ ಪರನಾರೀ ಸಂಗದಿಂದ ಸಾವುನೋವಿಗೆ ಈಡಾಗುವ ಅನಾಹುತ; ಆಸ್ತಿಪಾಸ್ತಿಗಾಗಿ ಒಡೆದಾಡಿ ಬೇಸರಪಡುವದೊಂದು ದುರವಸ್ಥೆ, ಮುಪ್ಪಾಗಿ ದೇಹ ದೌರ್ಬಲ್ಯದಿಂದ ಮಿಡುಕಿ, ಮಿಡುಕಿ ಮರಣವನ್ನಪೇಕ್ಷಿಸುವದೊಂದು ಕಟ್ಟಕಡೆಯ ಕಾಲಕ್ಷೇಪ.

ಹಣವಿದ್ದವನಿಗಾದರೂ ಸುಖವಿದೆಯೇ? ಕೋಟಿ ಸಂಪಾದನೆ ಮಾಡಿದವನಿಗೆ ಮತ್ತೊಂದು ಲಕ್ಷಗಳಿಸುವದರ ಮೇಲೆ ಗುರಿ. ಮಾತು ಕೇಳದ ಮಕ್ಕಳಿಂದಾಗುವ ಸಂತಾಪ, ಕಳ್ಳರ ಭಯದಿಂದ ರಾತ್ರಿಯಲ್ಲಿ ನಿದ್ರೆಗೆಟ್ಟು ಭೂತದಂತೆ ಹಣವನ್ನು ಕಾಯುವದೊಂದು ಕಷ್ಟ, ಹಣಬೇಡಿದವರಿಗೆ ಸಾಲಕೊಡದಿದ್ದುದರಿಂದ ಅವರ ವೈರತ್ವದ ಬಾಧೆ. ವಿದ್ಯಾವಂತನಾದವನಿಗಾದರೂ ಸುಖವುಂಟೋ? ಅದೆಲ್ಲಿಯದು? ಅವನಲ್ಲಿ ಸರಸ್ವತಿಯು ನೆಲೆಸಿರುವಳೆಂಬ ಅಸೂಯೆಯಿಂದ ಲಕ್ಷ್ಮಿಯು ಅವನನ್ನು ನಿರಂತರವಾಗಿ ಬಿಟ್ಟು ಹೋಗುವಳು. ಒಮ್ಮೊಮ್ಮೆ ಅನ್ನವಸ್ತ್ರಗಳಿಗೆ ಸಹ ಅಡಚಣಿಯೆನಿಸುವದು ಆದರೆ ಅವನು ವಿದ್ಯಾಪ್ರಭಾವದಿಂದ ನಿಗರ್ವಿಯೂ, ನೀತಿವಂತನೂ, ನಿರ್ಮಲ ವಿಚಾರಿಯೂ, ನಿಶ್ಚಿತ ಬುದ್ಧಿಯುಳ್ಳವನೂ, ದಯಾವಂತನೂ, ಆತ್ಮತೃಪ್ತನೂ ಆಗಿರುವನು. ಆದರೆ ಬಡತನದ ಮೂಲಕ ಕಡೆತನಕ ಅನೇಕ ಕಷ್ಟನಷ್ಟಗಳನ್ನು ಅನುಭವಿಸುವನು. ಒಟ್ಟಿನ ಮೇಲೆ ಪ್ರಪಂಚದಲ್ಲಿ ದುಃಖಗಳೇ ಹೆಚ್ಚು.

ಈ ವಿಧದ ವಿಚಾರಗಳು ದುರಂಧರನ ಹೆಂಡತಿಯ ತಲೆಯಲ್ಲಿ ಚಕ್ರದಂತೆ ತಿರುಗ ಹತ್ತಿದವು. ತನ್ನ ಗಂಡನು ಸುಧಾರಣೆ ಹೊಂದುವದು ಅಶಕ್ಯವು ಮತ್ತು ತನ್ನ ಮೇಲೆ ಪ್ರೇಮ ತೋರಿಸುವದಂತೂ ಅಸಂಭವವು. ಇಂಥ ಪರಿಸ್ಥಿತಿಯಲ್ಲಿ ಬದುಕಿದ್ದು ಪ್ರಯೋಜನವೇನು? ಎಂದು ಅವಳು ನಿರ್ಧಾರಕ್ಕೆ ಬಂದಳು ಈ ಕ್ಷಣವೇ ಅವಳು ಥಟ್ಟನೇ ಎದ್ದು ನಿಂತು ಕೈಯಲ್ಲಿ ಕಂದೀಲನ್ನು ಹಿಡಿದುಕೊಂಡು ಮಧ್ಯರಾತ್ರಿಯ

ಕತ್ತಲೆಯನ್ನು ಲೆಕ್ಕಿಸದೆ ಹೊರ ಹೊರಟಳು. ನಾವು ಒಂದನೆಯ ಪ್ರಕರಣದಲ್ಲಿ ಒಬ್ಬ ನಾರಿಯು ರಾತ್ರಿ ಸಂಚಾರ ಹೊರಟದ್ದನ್ನೂ ಹಾಗು ಅವಳು ಒಂದು ಸೇತುವೆಯ ಮೇಲೆ ಬಂದುದನ್ನೂ, ಕೆಲಕ್ಷಣ ದಲ್ಲಿ ಪ್ರವಾಹದಲ್ಲಿ ಧುಮುಕಿದ್ದರ ದುರಂತವನ್ನೂ ವರ್ಣಿಸಿದ್ದೇವೆ. ಆ ನಾರಿಯೇ ಇವಳು. ದುರಂಧರನ ಹೆಂಡತಿಯಾದ ವಿಮಲೆಯು. ಗಂಡನು ಅನಾದರ ಮಾಡಿದ ಕಾರಣದಿಂದ ಮತ್ತು ಗಂಡನ ಅನಾ ಚಾರ, ದುಷ್ಟಪ್ರವೃತ್ತಿಗಳ ಮೂಲಕ ಜೀವಕ್ಕೆ ಬೇಸತ್ತು ಅವಳು ನದಿಯಲ್ಲಿ ಧುಮುಕಿ ಜೀವವನ್ನು ನೀಗಿದಳು. ಮನಷ್ಯನಿಗೆ ಜೀವವು ಎಲ್ಲಕ್ಕೂ ಪ್ರಿಯವಾದದ್ದು. ಜೀವವನ್ನು ಉಳಿಸಿಕೊಳ್ಳುವುದಕ್ಕಾಗಿ ಅವನು ಹೆಂಡರು ಮಕ್ಕಳನ್ನು ಬಿಡಲು ಸಿದ್ಧನಾಗುತ್ತಾನೆ, ಸರ್ವ ಸಂಪತ್ತನ್ನೂ ತ್ಯಾಗಮಾಡಲು ಒಪ್ಪುತ್ತಾನೆ. ಆದರೆ ಸಹಿಸಲಸಾಧ್ಯ ವಾದ ಸಂಕಟಗಳು ಒದಗಿದಾಗ, ಅನಿವಾರ್ಯವಾದ ನಿತ್ಯ ಹಾಗು ಮರಣಪರ್ಯಂತರವಾದ ಕಷ್ಟಗಳ ಕಾರ್ಮೋಡಗಳು ಕವಿದಾಗ ಸರ್ವ ಪ್ರಿಯವಾದ ಜೀವವು ಕಸಕ್ಕಿಂತಲೂ ಕಡೆಯಾಗಿ ಕಾಣುವದು. ಆಗ ಮನುಷ್ಯನು ಜೀವವನ್ನು ನೀಗಲು ಹಿಂಜರಿಯುವುದಿಲ್ಲ.

### ಪ್ರಕರಣ ೫

## ಶಂಕರನ ವಿದೇಶ ಪ್ರಯಾಣ

ನಾವು ಹಿಂದೆ ಹಳ್ಳಿಯ ಹುಡುಗನಾದ ಶಂಕರನ ವಿದ್ಯಾಪ್ರಗತಿ ಯನ್ನು ವಿವರಿಸಿದ್ದೇವೆ. ಅವನು ಬಿ. ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ ಯಲ್ಲಿ ತೇರ್ಗಡೆಯಾದುದರಿಂದ ಸರಕಾರವು ಅವನಿಗೆ ವೇತನ ಕೊಟ್ಟು ವಿಲಾಯತಿಗೆ ಕಳಿಸಲು ನಿರ್ಧರಿಸಿತೆಂದು ಹೇಳಿದ್ದೇವೆ. ಅವನಿಗೆ ಸರಕಾರವು ಪ್ರಯಾಣ ಪರವಾನಿಗೆ ಪತ್ರವನ್ನು ಕೊಟ್ಟಿತು. ಅವನು ಹೊರಡುವ ದಿನವು ನಿಶ್ಚಿತವಾಯಿತು. ಜಮೀನದಾರನಾದ ಸದಾಶಿವ ರಾಯನು

ತಾನು ಸಾಕಿಸಲುಹಿದ ಬಾಲಕನು ತನಗೆ ಕೀರ್ತಿಯನ್ನು ತಂದನೆಂದು ಹಿರಿಹಿರಿ ಹಿಗ್ಗಿದನು. ಅವನು ಶಂಕರನ ತಂದೆ ತಾಯಿಗಳನ್ನು ಕರೆಕಳುಹಿದನು. ಅವರು ಶಂಕರನು ಸಮುದ್ರ ಪ್ರಯಾಣವನ್ನು ಮಾಡುವನೆಂಬ ಸುದ್ದಿಯನ್ನು ಕೇಳಿ ಅವನಿಗೆ ಸಮುದ್ರದಲ್ಲಿ ಯಾವ ಅನಾಹುತ ಸಂಭವಿಸುವದೋ ಅಥವಾ ಅವನು ಧರ್ಮಭ್ರಷ್ಟನಾಗಬಹುದೋ ಇಲ್ಲವೆ ವಿದೇಶದ ವೈಭವಗಳಿಗೆ ಮೋಹಗೊಂಡು ಸ್ವದೇಶಕ್ಕೆ ಮರಳಿ ಬರುವನೋ ಇಲ್ಲವೋ ಎಂಬ ವಿಚಾರಗಳಿಂದ ಗಾಬರಿಯಾದರು. ಅವರು ಹಳ್ಳಿಯನ್ನು ಬಿಟ್ಟು ಹೊರಗೆ ಹೋದವರಲ್ಲ. ಪುಣೆಯೊಂದನ್ನು ಮಾತ್ರ ಸದಾಶಿವರಾಯನ ಮೂಲಕ ಕಂಡವರು. ಆರುಸಾವಿರ ಮೈಲುಗಳ ದೂರದಲ್ಲಿರುವ ಲಂಡನ್ ಪಟ್ಟಣಕ್ಕೆ ತಮ್ಮ ಮಗನು ಹೋಗುವನೆಂಬುದು ಅವರಿಗೆ ಪಾತಾಳಲೋಕವೆಂದೇ ಕಲ್ಪನೆಯಾಯಿತು.

ಸದಾಶಿವ ರಾಯನು ಶಂಕರನ ತಂದೆ ತಾಯಿಗಳ ಮುಗ್ಧ ತಿಳುವಳಿಕೆಯನ್ನು ಕಂಡು ನಸುನಕ್ಕನು. ಅವನು ಅವರ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿ ಶಂಕರನು ಬುದ್ಧಿವಂತನೂ, ನೀತಿವಂತನೂ, ಹಿತಾಹಿತಗಳ ತಾರತಮ್ಯ ಬಲ್ಲವನೂ ಇರುವದರಿಂದ ಅವನು ಹೆಚ್ಚಿನ ವಿದ್ಯಾಭ್ಯಾಸ ಮುಗಿಸಿಕೊಂಡು ಸುರಕ್ಷಿತವಾಗಿ ಸ್ವದೇಶಕ್ಕೆ ಬರುವನೆಂದು ಅವರಿಗೆ ಮನವರಿಕೆಮಾಡಿಕೊಟ್ಟನು. ಅಷ್ಟರಿಂದ ಅವರು ತೃಪ್ತರಾಗದೆ ಮಗನನ್ನು ಏಕಾಂತದಲ್ಲಿ ಕುಳ್ಳಿರಿಸಿಕೊಂಡು ಅವನಿಗೆ ಉಪದೇಶಪರವಾದ ಕೆಲವು ಮಾತುಗಳನ್ನು ಹೇಳತೊಡಗಿದರು. ಶಂಕರನಾದರೋ ಭಯಭಕ್ತಿಯಿಂದ ಅವರ ಮಾತಿಗೆ ಕಿವಿಗೊಟ್ಟನು.

ತಂದೆ—ಶಂಕರಾ; ನಮ್ಮನ್ನು ಕಣ್ಣುತಪ್ಪಿಸಿ ಪರಲೋಕಕ್ಕೆ ಹೋಗುವಿಯಲ್ಲ! ನೀನೊಬ್ಬನೇ ನಮ್ಮ ಕರುಳು. ನಿನ್ನನ್ನು ಅಗಲಿ ನಾವು ಮಿಡುಕುವೆವು.

ಶಂಕರ—ಅಪ್ಪಾ, ಇದೇನು ನಿನ್ನ ತಿಳುವಳಿಕೆ? ನಾನು ಹೋಗುವದು ಪರಲೋಕವಲ್ಲ, ಪಾತಾಳವಲ್ಲ. ಸಮುದ್ರದಾಚೆಗೆ ಭೂಮಿಯ ಒಂದು ಭಾಗ; ಸಮುದ್ರದ ನಡುವೆ ಇರುವ ಒಂದು ನಡುಗಡ್ಡೆ.

ತಂದೆ-ಹಾಗಾದರೆ ಪಾತಾಳಲೋಕವಾವುದು? ಅದೆಷ್ಟುದೂರವಿದೆ?

ಶಂಕರ—ಪಾತಾಳಲೋಕವೆಂಬುದು ಪುರಾಣದಲ್ಲಿ ಹೇಳಿದೆ. ಅಂದೊಂದು ಕಲ್ಪಿತ ಲೋಕ, ಅದನ್ನು ಯಾರೂ ನೋಡಿಲ್ಲ. ಅದರಂತೆ ಸ್ವರ್ಗವೆಂಬುದು ಸಹ ಮುಗಿಲಿನ ಮೇಲಿರುವುದೆಂದು ಮನುಷ್ಯನ ತಿಳುವಳಿಕೆ. ಅದನ್ನು ನೋಡಿಬಂದವರು ಯಾರೂ ಇಲ್ಲ.

ತಂದೆ—ಹಾಗಾದರೆ ಭೂಮಿಯ ಮೇಲಿರುವ ದೇಶಗಳು ಮತ್ತಾವವು?

ಶಂಕರ—ಏಶಿಯಾ ಖಂಡವೆಂಬ ಭೂಭಾಗದಲ್ಲಿ ನಮ್ಮ ದೇಶವಾದ ಹಿಂದುಸ್ಥಾನ, ಚೀನ, ಜಪಾನ, ಇರಾಣ, ರಷಿಯಾ ಮೊದಲಾದ ದೇಶ ಗಳುಂಟು. ಆಫ್ರಿಕಾ ಖಂಡವು ನಮ್ಮ ದೇಶದ ಪಶ್ಚಿಮದಲ್ಲಿದೆ. ಅರೇಬಿಯಾ ದೇಶವೂ ಪಶ್ಚಿಮದಲ್ಲಿದೆ. ಯುರೋಪಖಂಡದಲ್ಲಿ ಇಂಗ್ಲಂಡ, ಫ್ರಾನ್ಸ್, ಸ್ಪೇನ, ಇಟಲಿ, ಜರ್ಮನಿ, ರಷಿಯಾ ಮೊದಲಾದ ದೇಶಗಳುಂಟು. ಅಮೇರಿಕಾ ಖಂಡವು ನಮ್ಮ ದೇಶದ ಬೆನ್ನುಭಾಗದಲ್ಲಿದೆ.

ತಂದೆ ಇದೇನು? ಬೆನ್ನು ಭಾಗದಲ್ಲಿದ್ದರೆ ಪಾತಾಳಲೋಕದಂತಾ ಗಲಿಲ್ಲವೇ!

ಶಂಕರ—ಹಾಗಲ್ಲ, ಭೂಮಿಯು ಗೋಲಾಕಾರವಿರುವುದರಿಂದ ಕೆಲವು ದೇಶಗಳು ಒಂದು ಪಕ್ಕದಲ್ಲಿಯೂ, ಕೆಲವು ಮತ್ತೊಂದು ಪಕ್ಕದಲ್ಲಿಯೂ, ಇರುವವು. ಪ್ರಥ್ವಿಯು ಚೆಂಡಿನಂತಿರುವದರಿಂದ ಅದು ಸೂರ್ಯನ ಸುತ್ತಲೂ ತಿರುಗುತ್ತಿರುವದು. ಅದರಿಂದ ಒಮ್ಮೆ ಹಗಲು ಮತ್ತೊಮ್ಮೆ ರಾತ್ರಿಯೂ ಆಗುವದು. ನಾವಿರುವ ದೇಶವು ಸೂರ್ಯನಿಗೆ ಮರೆಯಾದಾಗ ನಮಗೆ ಕತ್ತಲೆಯಾಗುವದು. ಭೂಮಿಯು ತಿರುಗುವಾಗ ಸೂರ್ಯನಿಗೆ ಎದುರಾಗಲು ಹಗಲುಂಟಾಗುವದು. ಆಷ್ಟ್ರೇಲಿಯಾ ಖಂಡವು ಭೂಗೋಲದ ದಕ್ಷಿಣದಿಕ್ಕಿನಲ್ಲಿದೆ. ಈ ದೇಶಗಳನ್ನು ಸುತ್ತಿ ಕೊಂಡು ಅಲ್ಲಲ್ಲಿ ಮಹಾಸಾಗರಗಳುಂಟು. ನಮ್ಮ ಪೂರ್ವದಿಕ್ಕಿನಲ್ಲಿರುವ ಪ್ಯಾಸಿಫಿಕ್ ಸಾಗರದಲ್ಲಿ ಅನೇಕ ನಡುಗಡ್ಡೆಗಳುಂಟು. ಹಿಂದೀಸಾಗರ, ಭೂಮಧ್ಯಸಮುದ್ರ, ಕಪ್ಪುಸಮುದ್ರ, ಕ್ಯಾಸ್ಪಿಯನ್‌ಸಮುದ್ರ, ಬಾಲ್ಟಿಕ್ ಸಮುದ್ರ, ಅಟ್ಲಾಂಟಿಕ್ ಮಹಾಸಾಗರ, ಉತ್ತರಸಮುದ್ರ ಮುಂತಾ ದವು ಭೂಭಾಗಗಳನ್ನು ಆವರಿಸಿಕೊಂಡಿರುವವು.

ತಂದೆ— ಇವೆಲ್ಲ ದೇಶಗಳನ್ನು ಯಾರು ಗೊತ್ತು ಹಚ್ಚಿರುವರು?

ಶಂಕರ - ನಾವಿಕರೂ, ಪ್ರಯಾಣಿಕರೂ, ಹೊಸ ವಾಸಸ್ಥಳಗಳನ್ನು ಹುಡುಕುತ್ತ ಹೊರಟವರೂ ಇವೆಲ್ಲ ದೇಶಗಳನ್ನು ಕಂಡಿದ್ದಾರೆ.

ತಂದೆ—ಇಂಗ್ಲಂಡದಲ್ಲಿ ಯಾವ ಜನರಿದ್ದಾರೆ? ಅವರ ಆಹಾರ ವೇನು, ಅವರ ಜಾತಿ ಯಾವದು?

ಶಂಕರ—ಅವರು ಬಿಳಿ ಬಣ್ಣದವರು, ಅವರ ಆಹಾರ ಮಾಂಸ, ಅವರ ಧರ್ಮ ಕ್ರೈಸ್ತಮತ, ಅವರ ಭಾಷೆ ಬೇರೆ, ರೀತಿಪದ್ಧತಿಗಳು ಬೇರೆ, ಅವರಲ್ಲಿ ಹೆಂಗಸರಿಗೆ ಗಂಡಸರಷ್ಟೇ ಸ್ವಾತಂತ್ರ್ಯ, ಹೆಂಗಸರು ತಮ್ಮ ಗಂಡಂದಿರನ್ನು ತಾವೇ ಚುನಾಯಿಸಿಕೊಳ್ಳುವರು. ಗಂಡಸರೊಡನೆ ಸ್ವೇಚ್ಛೆಯಿಂದ ಅಡ್ಡಾಡುವರು. ಗಂಡಸರಂತೆ ಉದ್ಯೋಗ, ನೌಕರಿಗಳನ್ನು ಕೈಕೊಳ್ಳುವರು. ಯುದ್ಧ ಪ್ರಸಂಗಗಳಲ್ಲಿ ದಂಡಿನಲ್ಲಿ ಸೇರಿ ಪುರುಷರಂತೆ ಧೈರ್ಯದಿಂದ ಕಾದುವರು.

ತಂದೆ—(ಈ ಮಾತುಗಳನ್ನು ಕೇಳಿ ಗಾಬರಿಯಾಗಿ) ಮಗನೇ, ಮಾಂಸಾಹಾರದಿಂದ ನಿನ್ನ ಜಾತಿ ಕೆಡುವದಿಲ್ಲವೇ?

ಶಂಕರ—ವಿಲಾಯತಿಯಲ್ಲಿ ಶಾಕಾ ಹಾರಿಗಳೂ ಇದ್ದಾರೆ, ಅಲ್ಲಿ ನಾವು ಧಾನ್ಯಗಳಿಂದ ಸಿದ್ಧವಾದ ಆಹಾರವನ್ನು ತೆಗೆದುಕೊಳ್ಳಬಹುದು.

ತಂದೆ—ಅಲ್ಲಿಯ ಹೆಂಗಸರು ಸ್ವೇಚ್ಛೆಯುಳ್ಳವರಿರುವ ಮೂಲಕ ಅವರ ರೀತಿ, ನೀತಿ, ನಡಾವಳಿಗಳು ಸಡಿಲಾದವುಗಳಿರಬೇಕು. ಶಂಕರಾ, ನೀನು ಮಾಂಸ ತಿನ್ನುವದಿಲ್ಲವೆಂತಲೂ, ಸ್ತ್ರೀ ಮೋಹಕ್ಕೆ ಬೀಳುವದಿಲ್ಲ ವೆಂತಲೂ ಧರ್ಮಭ್ರಷ್ಟನಾಗುವದಿಲ್ಲವೆಂತಲೂ ಪ್ರತಿಜ್ಞೆ ಮಾಡುವಿಯಾ?

ಶಂಕರ—ಅಪ್ಪಾ, ಹೀಗೇಕೆ ಅನುಮಾನಪಡುವೆ? ದೇವರಾಣೆ, ನಿನ್ನಾಣೆ, ತಾಯಿಯ ಆಣೆಯಾಗಿ ನಾನು ಮಾಂಸ ತಿನ್ನುವದಿಲ್ಲ, ಸ್ತ್ರೀ ವ್ಯಾಮೋಹಕ್ಕೆ ಬಲಿಯಾಗುವದಿಲ್ಲ ಹಾಗು ಧರ್ಮತ್ಯಾಗ ಮಾಡುವದಿಲ್ಲ.

ಈ ಪ್ರತಿಜ್ಞೆಯನ್ನು ಕೇಳಿ ಶಂಕರನ ತಂದೆಯು ಸಮಾಧಾನ ಹೊಂದಿದನು. ಮರುದಿನವೇ ಬೊಂಬಾಯಿಯಿಂದ ಪಿ ಆ್ಯಂಡ್ ಓ ಕಂಪ ನಿಯ ಲೂಸಿ ಎಂಬ ಉಗಿಹಡಗವು ಸಂಜೆಯ ಮುಂದೆ ಹೊರಡುವ ದಿತ್ತು. ಶಂಕರನು ಪುಣೆಯಿಂದ ಬೆಳಗಿನ ಗಾಡಿಯಿಂದ ಹೊರಟನು.

ಅವನ ಸಂಗಡ ಸದಾಶಿವರಾಯನೂ, ಶಂಕರನ ತಂದೆತಾಯಿಗಳೂ ಮುಂಬಯಿಯ ವರೆಗೆ ಹಿಂಬಾಲಿಸಿದರು. ಗೇಟ್‌ವೇ ಆಫ್ ಇಂಡಿಯಾ ಎಂಬ ಬಂದರದ ಒಂದು ಮೈಲು ದೂರದಲ್ಲಿ ಲೂಸಿ ಹಡಗವು ನಿಂತು ಕೊಂಡಿತ್ತು. ಭಾರತೀಯ ಹಾಗು ಇಂಗ್ಲಿಷ್ ಪ್ರಯಾಣಿಕರು ದೋಣಿಗಳಲ್ಲಿ ಕುಳಿತು ಹಡಗವನ್ನೇರಲು ತಂಡ ತಂಡವಾಗಿ ನೆರೆದಿದ್ದರು. ಶಂಕರನು ದೋಣಿಯನ್ನು ಹತ್ತುವಾಗ ಸದಾಶಿವರಾಯನಿಗೂ, ತಂದೆತಾಯಿಗಳಿಗೂ ನಮಸ್ಕಾರ ಹಾಕಿದನು. ಆಗ ಅವರು ಅವನನ್ನು ಅಗಲುವ ದುಃಖದಿಂದ ಕಣ್ಣೀರು ಸುರಿಸಿದರು. ಅದನ್ನು ನೋಡಿ ಶಂಕರನಿಗೆ ಕ್ಷಣ ಹೊತ್ತು ಆವೇಗವುಂಟಾದರೂ ಅದನ್ನು ಹೊರಗೆ ತೋರಿಸದೆ ಅವನು ಅವರನ್ನು ಸಂತೈಸಿದನು. ಅವನು ಹಡಗವನ್ನೇರಿದ ಅರ್ಧ ಘಂಟೆಯ ಮೇಲೆ ಲೂಸಿ ಹಡಗವು ಹೊರಡುವ ಧ್ವನಿಯನ್ನು ಮಾಡಿತು. ಅದರ ವೇಗವು ತಾಸಿಗೆ ೫೦ ಮೈಲುಗಳಿದ್ದಾಗ್ಯೂ ಲೂಸಿಯು ಬಸವನ ಹುಳದಂತೆ ಮೆಲ್ಲಗೆ ಹೋಗುವ ಹಾಗೆ ದೂರದಲ್ಲಿರುವವರಿಗೆ ಕಾಣುತ್ತಿತ್ತು. ಲೂಸಿಯು ಕಣ್ಣಿಗೆ ಕಾಣದ ಹಾಗಾಗುವವರೆಗೆ ಪ್ರಯಾಣಿಕರನ್ನು ಕಳುಹ ಬಂದವರೆಲ್ಲ ಬಂದರದ ಬಾಕುಗಳ ಮೇಲೆ ನೋಡುತ್ತ ಕುಳಿತಿದ್ದರು.

ಸದಾಶಿವರಾಯನು ಮುಂಬಯಿಯಿಂದ ಶಂಕರನ ತಂದೆತಾಯಿಗಳೊಂದಿಗೆ ಪುಣೆಗೆ ಬಂದನು. ಲೂಸಿ ಹಡಗವು ಕೆಲವು ತಾಸುಗಳ ನಂತರ ಕೆಂಪು ಸಮುದ್ರದ ಪ್ರವೇಶದ್ವಾರದಲ್ಲಿರುವ ಏಡನ್ ಬಂದರಕ್ಕೆ ತಲುಪಿತು. ಅದು ದೊಡ್ಡ ಬಂದರವಾದುದರಿಂದ ಹಡಗದ ಹಾಗು ಪ್ರಯಾಣಿಕರ ವಿಶ್ರಾಂತಿ ಸ್ಥಾನವಾಗಿತ್ತು. ಹಡಗದಲ್ಲಿ ಯಾವದಕ್ಕೂ ಅನಾನುಕೂಲವಿರಲಿಲ್ಲ. ಪ್ರತಿಯೊಬ್ಬನಿಗೆ ಕುರ್ಚಿ, ಮೇಜು, ಪಲ್ಲಂಗ, ಸ್ನಾನದ ಮನೆ; ಫಲಾಹಾರ ಊಟ ದೊರೆಯುವ ಅಂಗಡಿಗಳು, ಟೆನ್ನಿಸ್ ಮುಂತಾದ ಆಟದ ಅಂಗಣಗಳು ವಿನೋದವನ್ನುಂಟುಮಾಡುವವು. ಲೂಸಿಯು ಏಡನ್ನನ್ನು ಬಿಟ್ಟನಂತರ ಕೆಂಪು ಸಮುದ್ರ ಹಾಗು ಸುಯೇಜ್ ಕಾಲುವೆಗಳನ್ನು ದಾಟಿ ಪೋರ್ಟ್ ಸೈಯದ ಬಂದರಕ್ಕೆ ಬಂದಿತು. ಆ ಮುಂದೆ ಭೂಮಧ್ಯಸಮುದ್ರ ಪ್ರಾರಂಭವಾದುದರಿಂದ

ಹಡಗವು ಇಟಲಿಯ ದಕ್ಷಿಣದಲ್ಲಿರುವ ಮಾಲ್ಟಾ ಬಂದರಕ್ಕೆ ತಲುಪಿತು. ಅಲ್ಲಿ ೬-೭ ಘಂಟೆಯ ಕಾಲ ವಿಶ್ರಾಂತಿ ಪಡೆಯಿತು. ಮುಂದೆ ಸ್ಪೇನದೇಶದ ದಕ್ಷಿಣದಲ್ಲಿರುವ ಜಿಬ್ರಾಲ್ಟರ ಬಂದರಕ್ಕೆ ಬಂದಿತು. ಇದು ಭೂಮಧ್ಯ ಸಮುದ್ರದ ಮತ್ತು ಅಟ್ಲಾಂಟಿಕ್ ಸಾಗರಗಳನ್ನು ಜೋಡಿಸುವ ಸಂಧಿಸ್ಥಳ ಅಥವಾ ಅಗಸೆ ಬಾಗಿಲದಂತಿರುವದರಿಂದ ಇದೊಂದು ಮಹತ್ವದ ಬಂದರವಾಗಿದೆ. ಇಲ್ಲಿ ಪ್ರಯಾಣಿಕರೆಲ್ಲರು ಹಡಗದಿಂದಿಳಿದು ಪಟ್ಟಣದೊಳಗೆ ವಿಶ್ರಾಂತಿಗಾಗಿ ತಿರುಗಾಡಲು ಹೋಗುತ್ತಾರೆ. ಇಲ್ಲಿ ಹಡಗವು ಬಹಳ ಕಾಲ ನಿಲ್ಲುವದು. ಹಡಗಕ್ಕೆ ಬೇಕಾದ ಕಲ್ಲಿದ್ದಲು, ಕುಡಿಯುವ ನೀರು, ಆಹಾರ ಪದಾರ್ಥಗಳು ಇಲ್ಲಿ ಸಂಗ್ರಹಿಸಲ್ಪಡುವವು. ಇಲ್ಲಿಂದ ಮುಂದೆ ಹಡಗವು ಸ್ಪೇನದ ದಂಡೆಗುಂಟ ಲಿಸ್ಬನ್, ಒಪೋರ್ಟೋ ಬಂದರಗಳ ಮೂಲಕ ಫ್ರಾನ್ಸದ ಸಮುದ್ರ ದಂಡೆಗುಂಟ ಪ್ರಯಾಣಮಾಡಿ ಬ್ರಿಸ್ಟ ಬಂದರವನ್ನು ತಲುಪಿತು. ಮುಂದೆ ಇಂಗ್ಲಿಷ್ ಆಖಾತದ ಮೂಲಕ ಡೋವ್ಹರ್ ಬಂದರವನ್ನು ಮುಟ್ಟಿತು. ಲಂಡನ್ನಕ್ಕೆ ಹೋಗುವ ಪ್ರಯಾಣಿಕರೆಲ್ಲರು ಅಲ್ಲಿ ಇಳಿದರು. ಡೋವ್ಹರದಿಂದ ರೈಲುಗಾಡಿಯಿಂದ ಅವರು ಲಂಡನಕ್ಕೆ ಹೋಗುವರು. ಶಂಕರನು ಅಲ್ಲಿಯೇ ಇಳಿದು ಉಗಿಬಂಡಿಯಿಂದ ಲಂಡನಕ್ಕೆ ಹೊರಟನು.

ಹಡಗದಲ್ಲಿ ಶಂಕರನಿಗೆ ಅನೇಕರ ಗೆಳೆತನವಾಗಿತ್ತು. ೮—೧೦ ಜನರು ಐ. ಸಿ. ಎಸ್. ಪರೀಕ್ಷೆಗೆ ಬಂದವರೂ ಇದ್ದರು. ಲಂಡನ್ ನಿಲ್ದಾಣದಲ್ಲಿ ಇಳಿದಾಗ ಅಲ್ಲಿ ಇಂಡಿಯಾ ಕಚೇರಿಯ ಅಧಿಕಾರಿಗಳು ಐ. ಸಿ. ಎಸ್. ಪರೀಕ್ಷೆಗೆ ಬಂದ ವಿದ್ಯಾರ್ಥಿಗಳನ್ನು ಸ್ವಾಗತಿಸಿದರು. ಅವರಿಗಾಗಿ ಕಾಯ್ದುಕೊಂಡಿದ್ದ ಮೋಟರ ವಾಹನಗಳು ಅವರನ್ನು ಸೆವಾಯ್ ಹೊಟೇಲಿಗೆ ಕರೆದೊಯ್ದವು. ಆ ಅತಿಥಿಗೃಹವು ಏಳು ಅಂತಸ್ತುಗಳ ಮಹಲು. ಪ್ರತಿಯೊಂದು ಅಂತಸ್ತಿನಲ್ಲಿ ಎರಡು ನೂರು ಜನರ ವಾಸಕ್ಕೆ ವ್ಯವಸ್ಥೆ. ಪ್ರತ್ಯೇಕವಾದ ಅಡಿಗೆಮನೆ ಮತ್ತು ವಿಶಾಲವಾದ ಭೋಜನಶಾಲೆಗಳ ವ್ಯವಸ್ಥೆ. ರಹವಾಸಿಗಳನ್ನು ವಿದ್ಯುತ್ತಿನ ಶಕ್ತಿಯು ಪೆಟ್ಟಿಗೆಯ ಮೂಲಕ ಮೇಲಂತಸ್ತುಗಳಿಗೆ ಅನಾಯಾಸವಾಗಿ ಎತ್ತಿಕೊಂಡು ಹೋಗುವವು. ಕೊಠಡಿಗಳು ಎಲ್ಲತರದ ಸೌಕರ್ಯ

ವಸ್ತುಗಳಿಂದ ಸಜ್ಜಾಗಿರುವವು. ಥಂಡಿಯನ್ನು ಹೋಗಲಾಡಿಸುವ ಉಷ್ಣವಾಯುವಿನ ನಾಳಗಳು ಗೋಡೆಗಳ ಪಕ್ಕಕ್ಕೆ ಜೋಡಿಸಲ್ಪಟ್ಟಿರುವವು. ಮೇಜು, ಖುರ್ಚಿ, ನಿಲುಗನ್ನಡಿ, ಪಲ್ಲಂಗ, ಬಾನುಲಿ, ಟೆಲಿಫೋನ್ (ಮಾತಿನಿಂದ ಸುದ್ದಿ ಕಳಿಸುವ ಮತ್ತು ತಿಳಿದುಕೊಳ್ಳುವ ಯಂತ್ರ) ದೈನಿಕ ವೃತ್ತ ಪತ್ರಗಳು ಪ್ರತಿಯೊಂದು ಕೋಣೆಯಲ್ಲಿ ಸದಾ ಕಾಲದಲ್ಲಿ ಸಜ್ಜಾಗಿರುವವು.

ಲಂಡನ್ ಜಗತ್ತಿನ ಅತಿದೊಡ್ಡ ಪಟ್ಟಣಗಳಲ್ಲೊಂದಾಗಿದೆ. ಲೆಖ್ಖವಿಲ್ಲವಷ್ಟು ದೆವ್ವನಂತಹ ಇಮಾರತುಗಳು ಅನೇಕ ಮೈಲುಗಳವರೆಗೆ ನಾಲ್ಕೂ ದಿಕ್ಕಿನಲ್ಲಿ ಪಸರಿಸಿರುವವು. ಅವು ಕ್ಷಿತಿಜದವರೆಗೆ ಹಬ್ಬಿರುವಂತೆ ಕಾಣುವವು. ಬೀದಿಗಳಲ್ಲಿ ಬಿಗಿದ ಗದ್ದಲವನ್ನು ನೋಡಿದರೆ ಹೊಸಬರು ಬೆರಗಾಗುವರು. ಬೀದಿಗಳು ವಿಶಾಲವಾಗಿಯೂ ರಬ್ಬರ್ ಅಥವಾ ಡಾಂಬರುಗಳಿಂದ ಮೃದುವಾಗಿಯೂ, ಒಂದೇ ಪಾತಳಿಯಾಗಿಯೂ ರಚಿಸಲ್ಪಟ್ಟಿವೆ. ಬೀದಿಯ ಎರಡೂ ಬದಿಗೆ ಮನೆಗಳು ನೀಟಾಗಿ ನೂಲು ಹಚ್ಚಿ ಸಾಲುಮಾಡಿದಂತೆ ನೆಲೆಗೊಂಡಿವೆ. ಬೀದಿಯ ಪಕ್ಕಗಳಲ್ಲಿ ಕಾಲುದಾರಿಗಳು ಸಂಗಮವರೀ ಕಲ್ಲುಗಳಿಂದಲೂ, ರಬ್ಬರಿನ ಹಲಿಗೆಗಳಿಂದಲೂ ಹೊದಿಸಲ್ಪಟ್ಟಿವೆ. ಮಧ್ಯ ಬೀದಿಗಳಲ್ಲಿ ಟ್ರ್ಯಾಮ್ ಬಂಡಿಗಳ, ಮೋಟರುಗಳ, ಕುದುರೆ ರಥಗಳ ಸಲುವಾಗಿ ಶಹದಾರಿಯುಂಟು. ಈ ವಾಹನಗಳ ಸಾಗಾಟವು ತೆರಪಿಲ್ಲದೆ ಸಾಗುತ್ತಿರುವದು. ವಾಹನಗಳನ್ನು ಸರಿಯಾಗಿ ನಿಯಂತ್ರಣಗೊಳಿಸಲು ಅಲ್ಲಲ್ಲಿ ಪೋಲೀಸ್ ಸಿಬ್ಬಂದಿ ಇರುವುದು. ಹೀಗಿದ್ದರೂ ಅನೇಕಸಲ ವಾಹನಗಳ ತಾಕಲಾಟದಿಂದ ಸಾವು ನೋವುಗಳ ಅನಾಹುತಗಳು ಜರುಗುವವು.

ಲಂಡನಿನಲ್ಲಿ ಅನೇಕ ವಿದ್ಯಾಸಂಸ್ಥೆಗಳೂ,ಗಿರಣಿಗಳೂ, ವ್ಯಾಪಾರದ ಸಂಸ್ಥೆಗಳೂ, ಸರಕಾರದ ಕಚೇರಿಗಳೂ, ರಾಜಭವನಗಳೂ ಉಂಟು. ಲಂಡನ್ನಿನ ವಿಶ್ವವಿದ್ಯಾಲಯವು ಜಗತ್ಪ್ರಸಿದ್ಧವಾದ ಹಾಗು ಪುರಾತನವಾದ ಸಂಸ್ಥೆಯು, ಪಾರ್ಲಿಮೆಂಟ್ ಭವನವು, ಭವ್ಯವಾದ ಮಂದಿರವು, ಬ್ರಿಟಿಷ್ ಚಕ್ರಾಧಿಪತ್ಯಕ್ಕೊಳಪಟ್ಟ ಅಧೀನ ದೇಶಗಳ ನಿಯಂತ್ರಣಕ್ಕಾಗಿ

ಕಾಯಿದೆಗಳು ಇದೇ ಭವನದಲ್ಲಿ ರೂಪರೇಖೆಯನ್ನು ತಾಳುತ್ತವೆ. ರಾಜನ ಅರಮನೆಯು ಮತ್ತೊಂದು ಭವ್ಯ ಮತ್ತು ಸುಂದರವಾದ ಮಂದಿರವು. ವೆಷ್ಟ ಮಿನಿಷ್ಟರ ಅಬ್ಬೆ ಎಂಬುದು ಕ್ರೈಸ್ತ ದೇವಾಲಯವು, ಇದೂ ಸಹ ಮಹತ್ತರವಾದ ಕಟ್ಟಡವು. ಇದರ ಒಂದು ಭಾಗದಲ್ಲಿ ಹಿಂದಿನ ಮೃತರಾಜರೂ, ಕೀರ್ತಿವಂತರಾದ ಕವಿಗಳೂ ಸಮಾಧಿಯ ಸ್ಥಾನಪಡೆದಿದ್ದಾರೆ. ಈ ಕಟ್ಟಡಗಳು ಜರ್ಮನಿಯ ೨ನೆಯ ಮಹಾ ಯುದ್ಧದಲ್ಲಿ ಬಾಂಬುಗಳ ಬಡಿತಕ್ಕೆ ನುಗ್ಗಾಗಿರುವವು ಸುಂದರವಾದ ಇಮಾರತುಗಳ ಜೊತೆಗೆ ಅಲ್ಲಲ್ಲಿ ಅಂದವಾದ ಹೂದೋಟಗಳಿವೆ. ಅಲ್ಲಿ ಅನೇಕರು ವಿನೋದಕ್ಕಾಗಿ ಬರುವರು. ತರುಣ ಸ್ತ್ರೀಪುರುಷರ ಸಮಾಗಮವು ಬಹುತರ ಇಲ್ಲಿಯೇ- ಪ್ರೇಮಸಂಘಟನೆಯಾಗುವದು ಇಲ್ಲಿಯೇ. ವಿಟಸ್ತ್ರೀಯರರಾದರೂ ಇಲ್ಲಿಯೇ ಪುರುಷ ಬೇಟೆಯನ್ನು ಹುಡುಕುವರು. ಮರುಳರಾದ ವಿದೇಶೀಯರು ಅವರ ಮೋಹಕ್ಕೆ ಬಿದ್ದು ಕಾಮವಶರಾಗುವ ದೃಷ್ಟಾಂತಗಳು ಅನೇಕ. ಒಟ್ಟನ ಮೇಲೆ ಲಂಡನ್ ಪಟ್ಟಣವು ಉದ್ಯೋಗಶೀಲನಿಗೆ ಉಪಯುಕ್ತವಾದದ್ದು, ವ್ಯಸನಿಗಳಿಗೆ ಅಹಿತಕರವಾದದ್ದು. ಅತಿ ರಮ್ಯವಾದ ವಸ್ತುಗಳ ಅಂಗಡಿಗಳಿಂದ ಕೂಡಿದ್ದು, ಅಂಗಡಿಗಳಲ್ಲಿಯ ಬಟ್ಟೆಯ, ಆಟದ, ನೋಟದ ಬಗೆಬಗೆಯ ವಸ್ತುಗಳನ್ನು ನೋಡಿದರೆ ಕಣ್ಣು ಕುಕ್ಕುವದು. ಕೊಳ್ಳಲು ಹಣದಿಂದ ಶಕ್ತನಿರದಿದ್ದರೆ ಅವನು ಪಾಪಿಯೇ ಸರಿ. ಬಹಳ ಹೇಳುವದೇನು, ಲಂಡನವು ಭೂಮಿಯ ಮೇಲೆ ಇಂದ್ರಲೋಕದಂತಿರುವದೆಂಬ ಭಾವನೆಯುಂಟಾಗುವದು

ಲಂಡನ್ ಪಟ್ಟಣದ ಮಧ್ಯದಲ್ಲಿ ಥೆಮ್ಸನದಿಯು ಹರಿದು ಕೆಲವು ಅಂತರದ ಮೇಲೆ ಸಮುದ್ರಕ್ಕೆ ಕೂಡಿರುವದು ಅಲ್ಲಲ್ಲಿ ಸೇತುವೆಗಳು ಕಟ್ಟಲ್ಪಟ್ಟಿರುವವು. ನದಿಯು ಆಳವಾಗಿರುವುದರಿಂದ ದೋಣಿಗಳ ಸಂಚಾರವು ನಡೆದಿರುವದು. ನದಿಯ ನೋಟವು ಪಟ್ಟಣಕ್ಕೆ ವಿಶೇಷವಾದ ಶೋಭೆಯನ್ನುಂಟುಮಾಡಿರುವದು. ಇಂಗ್ಲಂಡವು ಉತ್ತರ ಧ್ರುವಕ್ಕೆ ಸಮೀಪವಿರುವದರಿಂದ ಅಲ್ಲಿ ಸೂರ್ಯನ ದರ್ಶನವು ಕ್ವಚಿತವು, ಹಗಲಿನಲ್ಲಿ ನಸು ಬೆಳಕು ಇರುವದು. ಥಂಡಿಯು ಸದಾಕಾಲದಲ್ಲಿರುವದು. ಚಳಿಗಾಲದಲ್ಲಿ ನೆಲದ ಮೇಲೆ ದಪ್ಪವಾದ ಬರ್ಫದ ಹೊದಿಕೆಯು ಬೀಳು

ವನು. ಆಗ ಜನರು ಬರ್ಫದ ಮೇಲೆ ಜಾರುಬಂಡಿಯ ಆಟ (Skating) ಆಡುವರು. ತಂಪು ಹವೆಯ ಮೂಲಕ ಜನರ ಬಣ್ಣವು ಬಿಳಿದಾಗಿಯೂ, ಆಹಾರವು ಗೋಧಿ, ಮಾಂಸ, ಮದ್ಯ ಮೊದಲಾದ ಉಷ್ಣತೆಯನ್ನುಂಟು ಮಾಡುವ ವಸ್ತುಗಳಿಂದ ಕೂಡಿದ್ದಾಗಿಯೂ, ಉಡುಪು ಉಣ್ಣೆಯ ಬಟ್ಟೆ ಬಿಗಿಯಾದ ಕೊಳಪಟ್ಟೆ, ಕುತ್ತಿಗೆಯ ಕಟ್ಟು, ಚಣ್ಣ, ಬೂಟು, ಕೋಟು, ಹ್ಯಾಟುಗಳಿಂದ ಕೂಡಿದ್ದೂ ಇರುವದು. ಅವರ ವಿಹಾರಗಳು ಸಹ ಹವಾಮಾನಕ್ಕೆ ಸರಿಯಾಗಿವೆ. ಥಂಡಿಯನ್ನು ಪರಿಹರಿಸಿಕೊಳ್ಳಲು ನಾಟ್ಯ ಸಂಘ (Dancing clubs) ಗಳನ್ನು ಮಾಡಿಕೊಂಡಿರುವರು. ಅಲ್ಲಿ ಪರಸ್ತ್ರೀಯರ ಸಂಗಡ ಗಂಡಸರು ಅಭ್ಯಂತರವಿಲ್ಲದೆ ಎದೆಗೆ ಎದೆ ಹಚ್ಚಿ ಕುಣಿಯುತ್ತಾರೆ. ಇದು ಅನಾಚಾರವೆಂದು ಅವರ ಭಾವನೆ ಇರುವದಿಲ್ಲ. ಸ್ತ್ರೀಯರಿಗೆ ಪುರುಷರಷ್ಟೇ ಸ್ವಾತಂತ್ರ್ಯವಿದೆ. ಲಂಡನಿನಲ್ಲಿ ಎಲ್ಲ ಜನಾಂಗದ ಜನರೂ, ವಿಚಿತ್ರವಾದ ಎಲ್ಲ ವಿಧದ ವಸ್ತುಗಳೂ ಕಂಡು ಬರುತ್ತವೆ. ಲಂಡನವು ಜಗತ್ತಿನಲ್ಲಿ ಒಂದು ಅಗಾಧವಾದ ವಸ್ತು ಸಂಗ್ರಹ ಶಾಲೆಯಂತಿದೆ (Museum).

## ಪ್ರಕರಣ ೬

## ಶಿವಾನಂದ ಸಾಧು

ಪುಣೆಯಿಂದ ಆರು ಮೈಲುಗಳ ಮೇಲೆ ಪಶ್ಚಿಮ ಘಟ್ಟದ ಸಾಲಿನ ಒಂದು ದೊಡ್ಡ ಬೆಟ್ಟ. ಅದರ ಪಕ್ಕದಲ್ಲಿಯೇ ಮುಳಾ ನದಿಯು ಹರಿಯುತ್ತದೆ. ನದಿಯ ಎರಡೂ ಪಕ್ಕಗಳಲ್ಲಿ ಮುಗಿಲು ಮುಟ್ಟುವಂಥ ದೇವದಾರು ಗಿಡಗಳು ಬೆಳೆದಿವೆ. ಬೆಟ್ಟದ ಸುತ್ತಲೂ ದಟ್ಟವಾಗಿ ಬೆಳೆದ ಗಿಡಗಳು ತರತರದ ಹಣ್ಣುಹಂಪಲಗಳಿಂದ ರಮ್ಯವಾಗಿಯೂ ಜನರ ನೋಟವನ್ನು ಎಳೆಯುವಂಥವೂ ಆಗಿರುವವು. ಬೆಟ್ಟದ ತುದಿಯಲ್ಲಿ

ಒಂದು ಶಿವ ದೇವಾಲಯವು. ಅದರ ಮತ್ತೊಂದು ಪಕ್ಕದಲ್ಲಿ ವಿಶಾಲ ವಾದ ಗವಿಯು. ಅದರಲ್ಲಿ ಬಹುಕಾಲದಿಂದ ಯೋಗಿಗಳೂ, ಸಾಧು ಗಳೂ ವಾಸಿಸುತ್ತ ಬಂದಿದ್ದರು. ಸದ್ಯದಲ್ಲಿ ಅದರಲ್ಲಿ ಶಿವಾನಂದನೆಂಬ ಒಬ್ಬ ಸಾಧುವು ವಾಸವಾಗಿದ್ದನು. ಅವನು ಯೋಗ ಸಾಧನೆಯಲ್ಲಿ ಸಮರ್ಥನೂ, ಆತ್ಮ ನಿಗ್ರಹದಲ್ಲಿ ಬಲಿಷ್ಠನೂ, ಬ್ರಹ್ಮಸಾಕ್ಷಾತ್ಕಾರದಲ್ಲಿ ಪರಿಪೂರ್ಣ ಅನುಭವಿಯೂ ಆಗಿದ್ದನು. ಅವನ ಆಹಾರವು ಕೇವಲ ಗಡ್ಡೆ, ಗೆಣಸು, ಹಣ್ಣುಹಂಪಲ ಮಾತ್ರವಾಗಿತ್ತು. ಸಮಾಧಿಯಲ್ಲಿ ಕುಳಿತರೆ ೩ - ೪ ತಿಂಗಳುಗಳ ವರೆಗೆ ಕುಳಿತ ಸ್ಥಳದಿಂದ ಚಲಿಸದೆ ಬ್ರಹ್ಮ ಸಂಧಾನದಲ್ಲಿಯೇ ನಿರತನಾಗಿರುತ್ತಿದ್ದನು. ದರ್ಶನಕ್ಕೆ ಬಂದ ಜನರು ಮೌನವಾಗಿ ನಮಸ್ಕಾರ ಹಾಕಿ ಹೋಗುತ್ತಿದ್ದರು. ಸಮಾಧಿಯಿಂದ ಜಾಗ್ರತನಾದ ಮೇಲೆ ದರ್ಶನಕ್ಕೆ ಬಂದವರಿಗೆ ಪಾರಮಾರ್ಥಿಕ ವಿಷಯ ಗಳ ಬೋಧೆಯನ್ನು ಮಾಡುತ್ತಿದ್ದನು.

ಭಕ್ತರಿಂದ ಸಾಧುವು ಹಣಕಾಸುಗಳನ್ನಾಗಲಿ, ಬಟ್ಟೆಬರೆಗಳನ್ನಾಗಲಿ, ಆಹಾರ ವಸ್ತುಗಳನ್ನಾಗಲಿ ಸ್ವೀಕರಿಸುತ್ತಿರಲಿಲ್ಲ. ಅವನು ವೇದ, ಉಪ ನಿಷತ್ತು, ಷಡ್ದರ್ಶನ, ಶೈವ, ವೀರಶೈವ, ವೈಷ್ಣವ ಧರ್ಮಶಾಸ್ತ್ರಗಳನ್ನು ಆಳವಾಗಿ ಅಭ್ಯಾಸಮಾಡಿದ್ದನು. ಯೋಗಾಭ್ಯಾಸವನ್ನು ಅರಿತುಕೊಳ್ಳಲು ಅವನಲ್ಲಿ ಹತ್ತು ಜನ ಶಿಷ್ಯರಿದ್ದರು. ಅವರು ನೆರೆಹಳ್ಳಿಗಳಲ್ಲಿ ಭಿಕ್ಷಾನ್ನ ದೊರಕಿಸಿ ಉಪಜೀವನ ಸಾಗಿಸುತ್ತಿದ್ದರು. ವಿಶಾಲವಾದ ಶಿವಾಲಯ ಮತ್ತು ಗವಿಯು ಅವರ ವಾಸ ಸ್ಥಳಗಳು. ಸಾಧುವಿನ ಮಹಾತ್ಮೆಯು ಬಹುದೂರ ಹರಡಿತ್ತು. ಸಂಸಾರತಾಪದಿಂದ ಬೆಂದವರು ಹಾಗು ಮೋಕ್ಷಾಪೇಕ್ಷಿಗಳು ಆ ಪವಿತ್ರ ಸ್ಥಾನಕ್ಕೆ ಆಗಾಗ್ಗೆ ಬಂದು ನದಿಯಲ್ಲಿ ಸ್ನಾನಮಾಡಿ, ಶಿವಾಲಯದಲ್ಲಿ ಪೂಜೆ, ಧ್ಯಾನಗಳನ್ನು ಅರ್ಪಿಸಿ ನಂತರ ಸಾಧುವಿನ ಸಾನ್ನಿಧ್ಯಕ್ಕೆ ಬಂದು ಉಪದೇಶದ ಲಾಭವನ್ನು ಹೊಂದುವರು. ಅಲ್ಲಿ ತಮ್ಮ ಸಂಸಾರದ ತಾಪಗಳನ್ನು ಪರಿಹರಿಸಿಕೊಳ್ಳುವರು. ಅಲ್ಲಿ ಶ್ರೀಮಂತರು, ಬಡವರೂ, ಬೇನೆಯುವರೂ, ಬೇಸರ ಹೊಂದಿದವರೂ ವಿಶ್ರಾಂತಿಗಾಗಿ ಬರುತ್ತಿದ್ದರು. ಕೆಲವು ಹಣವಂತರಾದ ಧಾರ್ಮಿ ಕರು ಬೆಟ್ಟದ ಅಡಿಯಲ್ಲಿ ಧರ್ಮ ಶಾಲೆಗಳನ್ನೂ, ನದಿಯಲ್ಲಿ ಸುಖ

ವಾಗಿ ಇಳಿದು ಸ್ನಾನಮಾಡುವದಕ್ಕಾಗಿ ಕಲ್ಲಿನ ಸೋಪಾನಗಳನ್ನೂ ನದಿಯನ್ನು ದಾಟುವದಕ್ಕಾಗಿ ದೋಣಿಗಳನ್ನೂ ನಿರ್ಮಿಸಿದ್ದರು. ಇವೆಲ್ಲ ಸೌಕರ್ಯಗಳು ನಿರ್ಮಾಣವಾದುದರಿಂದ ಆ ಸ್ಥಾನವು ಒಂದು ಪ್ರಸಿದ್ಧ ವಾದ ತೀರ್ಥಯಾತ್ರೆಯ ಸ್ಥಾನವಾಯಿತು.

ಆ ಸಾಧುವು ವಾಸವಾಗಿದ್ದ ಬೆಟ್ಟದ ಸುತ್ತಲೂ ಇದ್ದ ರಮ್ಯವಾದ ವನವು ಪೂರ್ವಕಾಲದ ಋಷಿಯ ಆಶ್ರಮವನ್ನು ಹೋಲುತ್ತಿತ್ತು. ಅಲ್ಲಿ ಮಾವು ಹಲಸು, ಪೇರಲ, ದಾಳಿಂಬ, ಕಿತ್ತಳೆ, ಅಂಜೂರ, ಅತ್ತಿ, ನೀರಲ, ಕವಳಿ ಮುಂತಾದ ಫಲಭರಿತವಾದ ವೃಕ್ಷಗಳು ವಿಶಾಲವಾಗಿ ಬೆಳೆದಿದ್ದವು. ಆ ವನದಲ್ಲಿ ಕ್ರೂರ ಮೃಗಗಳ ವಾಸವೇ ಇರಲಿಲ್ಲ. ಅಲ್ಲಿ ಹರಿಣ, ಸಾರಂಗ, ಮೊಲ, ಕಾಡು ಆಕಳು, ಕಡವೆ, ಕಸ್ತೂರಿ ಮೃಗ, ನವಿಲು, ಗಿಳಿ, ಮೈನಾ, ಪಾರಿವಾಳ ಮುಂತಾದ ಸಭ್ಯವಾದ ಮೃಗಪಕ್ಷಿಗಳಿದ್ದವು. ಫಲವೃಕ್ಷಗಳ ಮೇಲೆ ಕುಳಿತ ಮಂಗಗಳು ಗಿಡಗಳ ಅಡಿಯಲ್ಲಿ ಸುಳಿದಾಡುವ ಅತಿಥಿಗಳ ತೃಪ್ತಿಗಾಗಿಯೋ ಎಂಬಂತೆ ಹಣ್ಣುಗಳನ್ನು ಕೆಳಗೆ ಉದುರಿಸುತ್ತಿದ್ದವು. ಅತಿಥಿಗಳು ಆ ಹಣ್ಣುಗಳನ್ನು ತಿಂದು ಊಟವನ್ನೇ ಮರೆಯುತ್ತಿದ್ದರು. ಸಾಧುವಿನ ನಿವಾಸಕ್ಕೆ ಬಂದವರು ದೈವೀ ಭಕ್ತಿಯಿಂದಲೂ, ವೈರಾಗ್ಯ ಭಾವನೆಯಿಂದಲೂ, ಯೋಗ ಮಹಿಮೆಯ ವಿಚಾರದಿಂದಲೂ, ಸನ್ಮಾರ್ಗ ಪ್ರೇರಣೆಯಿಂದ ಪುಲಕಿತರೂ ಆಗುತ್ತಿದ್ದರು. ಬೆಟ್ಟದ ಅಡಿಯಲ್ಲಿದ್ದ ಧರ್ಮಶಾಲೆಗಳಲ್ಲಿ ಬಂದ ಅತಿಥಿಗಳಿಗೆ ಒಂದೆರಡು ದಿನಗಳವರೆಗೆ ಉಚಿತವಾದ ಊಟ ದೊರಕು ತ್ತಿತ್ತು. ಅಡಿಗೆಯು ಕೇವಲ ಧಾನ್ಯಾಹಾರದಿಂದ ಸಿದ್ಧವಾಗುತ್ತಿತ್ತು. ಅಲ್ಲಿ ಮದ್ಯ, ಮಾಂಸ ಮುಂತಾದ ಮಾದಕ ಮತ್ತು ಅನ್ನ, ಪಾನಗಳು ಖಂಡಿತವಾಗಿ ನಿಶೇಧಗೊಳಿಸಿದ ವಸ್ತುಗಳಾಗಿದ್ದವು. ಧರ್ಮಶಾಲೆಗಳ ವ್ಯವಸ್ಥಾಪಕರು ಯಾವ ಅನಾಚಾರಿಗಳನ್ನೂ ಅಲ್ಲಿ ಇರಗೊಡುತ್ತಿರಲಿಲ್ಲ.

ಆ ವನಪ್ರದೇಶದ ಯಾವ ಪಶುಪಕ್ಷಿಗಳನ್ನು ಯಾರೂ ಹಿಂಸೆ ಗೊಳಿಸುತ್ತಿರಲಿಲ್ಲ. ಜೇನು ಹುಟ್ಟುಗಳಲ್ಲಿರುವ ಜೇನುತುಪ್ಪವನ್ನು ತೆಗೆದುಕೊಂಡರೆ ಜೇನು ಹುಳಗಳ ಆಹಾರವನ್ನು ಅಪಹರಿಸಿದಂತಾಗುವ ದೆಂಬ ಭಾವನೆಯಿಂದ ಸಾಧುವಿನ ಸೂಚನೆಯ ಮೇರೆಗೆ ಯಾರೂ ಜೇನು

ಹುಟ್ಟುಗಳಿಗೆ ಕೈಹಾಕುತ್ತಿರಲಿಲ್ಲ. ಅಲ್ಲಿಗೆ ಬಂದ ಧಾರ್ಮಿಕರು ಅಲ್ಲಿಯ ಪಶುಪಕ್ಷಿಗಳಿಗೆ ಮೇವು ಕಾಳುಗಳನ್ನು ತಿನಿಸುತ್ತಿದ್ದರು. ಅವು ಜನರ ಸಮೀಪಕ್ಕೆ ಬಂದು ತಮ್ಮ ಸಭ್ಯತನವನ್ನೂ, ಸಲಿಗೆಯನ್ನೂ ವ್ಯಕ್ತ ಮಾಡುತ್ತಿದ್ದವು. ಪಶು ಪಕ್ಷಿಗಳು ಮುಪ್ಪಿನಿಂದಾಗಲಿ, ಬೇನೆಯಿಂದಾಗಲಿ ಮರಣಹೊಂದಿದರೆ ಸಾಧುವು ಅವುಗಳನ್ನು ಭೂಮಿಯಲ್ಲಿ ಹೂಳಿಸುತ್ತಿದ್ದನು. ಸಾಧುವು ಚಿಗರೆಯ ಚರ್ಮವನ್ನು ಆಸನಕ್ಕಾಗಲಿ ಅಥವಾ ವಸನಕ್ಕಾಗಲಿ ಉಪಯೋಗಿಸುತ್ತಿರಲಿಲ್ಲ. ಭೂಮಿಯೇ ಅವನ ಹಾಸಿಗೆ, ಆಕಾಶವೇ ಅವನ ಹೊದಿಕೆಯಾಗಿದ್ದವು. ಸೋರೆಯ ಕಾಯಿಯ ಕಮಂಡಲವು ಅವನ ನೀರಿನ ಪಾತ್ರೆಯು, ಮರದ ಚಕ್ಕೆಗಳು ಅವನ ಪಾದರಕ್ಷೆಗಳು, ಭಸ್ಮಧಾರಣವೇ ಅವನ ಅಲಂಕಾರ, ಜಡೆಯ ಮುಡಿಯೇ ಅವನ ಕಿರೀಟ, ಕರದಲ್ಲಿಯ ಇಷ್ಟಲಿಂಗವೇ ಅವನ ಪರದೈವ. ಇವುಗಳ ಹೊರತಾಗಿ ಯಾವ ವಸ್ತುವಿನ ಮೇಲೆಯೂ ಅವನಿಗೆ ಆಶೆಯಿರಲಿಲ್ಲ. ವೈರಾಗ್ಯವು ಅವನಲ್ಲಿ ಮೂರ್ತಿಮತ್ತಾಗಿ ನೆಲಸಿತ್ತು. ವಸ್ತುಗಳ ಮೇಲೆ ಆಪೇಕ್ಷೆಯುಂಟಾದರೆ ಲೋಭಮೋಹಗಳು ತಲೆದೋರುತ್ತವೆ. ಅವುಗಳ ಮೂಲಕ ಮನುಷ್ಯನು ಸಂಸಾರದ ಮೋಹಜಾಲದಲ್ಲಿಸಿಲುಕಿ ಬಳಲುತ್ತಾನೆ ಆಶೆಯ ಬೇರನ್ನು ಕಿತ್ತೊಗೆದವನಿಗೆ ಸಂಪತ್ತಿನ ಸೊಬಗು ಹೊಗೆಯಂತೆ ಕಾಣುವದು. ದುಃಖಮಯವಾದ ಜಗತ್ತು ಜೊಳ್ಳು ಕಾಳಿನಂತೆ ಕಾಣುವದು. ಶಾಶ್ವತನಾದ ಸುಖವನ್ನೀಯುವ ಪರಲೋಕ ಪ್ರಾಪ್ತಿಯು ಕಣ್ಣು ಮುಂದಿನ ಕನ್ನಡಿಯಂತೆ ಖಂಡಿತ ಸತ್ಯವಾಗಿ ತೋರುವದು. ಸಾಧುವು ಪೂರ್ಣ ತ್ಯಾಗಮೂರ್ತಿಯಾದುದರಿಂದಲೇ ಅವನು ಎಲ್ಲರಿಂದ ಪೂಜಿಸಲ್ಪಡುವ ಯೋಗ್ಯತೆಯನ್ನು ಪಡೆದಿದ್ದನು. ಭಾವಿಕರು ಆತನನ್ನು ಪ್ರತಿದೈವವೆಂದೇ ಭಾವಿಸುತ್ತಿದ್ದರು. ಸಾಧುವು ಭಕ್ತರನ್ನು ಪ್ರೇಮಾಸಂದಗಳಿಂದ ಸ್ವಾಗತಮಾಡುತ್ತಿದ್ದನು. ಅವರಿಗೆ ಕ್ಷೇಮವಾಗಲೆಂದು ಆಶೀರ್ವದಿಸುತ್ತಿದ್ದನು,

ಪ್ರಕರಣ ೭

# ದುರಂಧರನ ದುರ್ವಿಲಾಸ

ಈ ಮೊದಲು ನಾವು ದುರಂಧರನ ದುರ್ವ್ಯಸನಗಳನ್ನು ವರ್ಣಿಸಿದ್ದೇವೆ. ಅವನ ದುರಾಚಾರಗಳನ್ನು ಸಹಿಸಲಾರದೆ ಅವನ ಪತ್ನಿಯು ಪ್ರಾಣ ನೀಗಿದ್ದನ್ನು ತಿಳಿಸಿದ್ದೇವೆ. ಅವನ ಕಾಮವಾಸನೆಯು ಕಡುತರವಾಗಿ ಬೆಳೆಯುಹತ್ತಿತು. ಕಾಮುಕನಿಗೆ ಕಣ್ಣಿದರೂ ಕುರುಡುತನವುಂಟಾಗುವದು, ಬುದ್ಧಿಯಿದ್ದರೂ ಭ್ರಮೆಯುಂಟಾಗುವದು, ಕಿವಿಗಳಿದ್ದರೂ ಲೋಕಾಪವಾದಕ್ಕೆ ಕಿವುಡುತನವುಂಟಾಗುವದು, ಹಸನಾದ ಹೃದಯವಿದ್ದರೂ ಹೇಯವಾದ ಕೃತ್ಯಕ್ಕೆ ಹೆದರಿಕೆಯಿಲ್ಲದಂತಾಗುವದು. ದುರಂಧರನು ಕೇವಲ ವಿಲಾಸ, ಚೈನುಬಾಜಿಗಳಲ್ಲಿಯೇ ಕಾಲಕಳೆಯುಹತ್ತಿದನು. ಒಂದು ದಿನ ಅವನ ಮಿತ್ರರು ಅವನಿಗೆ ಜಲವಿಹಾರಕ್ಕಾಗಿ ಹೋಗೋಣವೆಂದು ಸೂಚಿಸಿದರು. ಅದಕ್ಕಾಗಿ ಮನೋಹರವಾದ ಸ್ಥಳವೆಂದರೆ ಶಿವಾನಂದ ಸಾಧುವಿನ ವನಪ್ರದೇಶವೆಂದು ಗೊತ್ತಾಯಿತು. ಜಲಕ್ರೀಡೆಗೆ ತಕ್ಕ ತರುಣ ನರ್ತಕಿಯರನ್ನು ಕಲೆಹಾಕಿದರು, ಐದಾರು ಮೋಟರ ಬಂಡಿಗಳು ಸಿದ್ಧವಾದುವು; ವಿಧವಿಧವಾದ ಪಕ್ವಾನ್ನಗಳು, ಮದ್ಯ, ಮಾಂಸ ತಾಂಬೂಲ, ಸುವಾಸಿಕ ದ್ರವ್ಯ, ವೀಣಾ, ಮೃದಂಗ ಮೊದಲಾದ ವಾದ್ಯಗಳು ವಾಹನಗಳಲ್ಲಿ ಇರಿಸಲ್ಪಟ್ಟವು. ಇವೆಲ್ಲ ಸಲಕರಣಗಳೊಂದಿಗೆ ದುರಂಧರನು ಜಲಕ್ರೀಡೆಗಾಗಿ ಸಾಧುವಿನ ವನಪ್ರದೇಶಕ್ಕೆ ಬಂದನು.

ಅಲ್ಲಿ ನದಿಯ ದಡಕ್ಕೆ ಕಟ್ಟಿದ ಕಲ್ಲಿನ ಹಾಸಿಗೆಯ ಸೋಪಾನದ ಮೇಲೆ ದುರಂಧರನು ತನ್ನ ವಿಲಾಸಿಗಳಾದ ಮಿತ್ರ ಮಂಡಲಿಯೊಡನೆ ಬಿಡಾರವನ್ನು ಹಾಕಿದನು. ಆ ಮೇಲೆ ಜಲಕ್ರೀಡೆಗಾಗಿ ಅವರೆಲ್ಲರು ಉಡಿಗೆಗಳನ್ನು ತೆಗೆದುಹಾಕಿ ನಗ್ನರಾಗಿ ನದಿಗೆ ಧುಮುಕಿದರು. ಅದರಂತೆ ನರ್ತಕಿಯರಾದರೂ ಉಡುಪುವಿಹೀನರಾಗಿ ನದಿಗೆ ಇಳಿದರು. ಕೆಲವರು ಈಜುತ್ತಿರಲು ಮತ್ತೆ ಕೆಲವರು ಈಜುಬರದವರು ಮುಳುಗುವಾಗ

ಗುಟುಕುನೀರು ಕುಡಿಯುಹತ್ತಿದರು ಅವರನ್ನು ಮೇಲಕ್ಕೆತ್ತಲು ಉಳಿದ ವರು ಯತ್ನಿಸುವರು. ಕೆಲಹೊತ್ತಿನ ಮೇಲೆ ಎಲ್ಲರೂ ಎದೆಯುಮಟ್ಟದ ನೀರಿನ ಸ್ಥಾನಕ್ಕೆ ಬಂದು ನರ್ತಕಿಯರೊಡನೆ ಕ್ರೀಡಾ ವಿಲಾಸಗಳನ್ನು ಪ್ರಾರಂಭಿಸಿದರು. ಕೆಲವರು ಸ್ತ್ರೀಯರ ಮುಖದ ಮೇಲೆ ನೀರನ್ನೆರಚು ವರು. ಕೆಲವರು ಅವರನ್ನು ಒತ್ತಾಯದಿಂದ ನೀರಿನೊಳಗೆ ನೂಕುವರು. ಕೆಲವರು ಅವರನ್ನು ಮೇಲಕ್ಕೆ ದೊಪ್ಪನೆ ನೀರಿನಲ್ಲಿ ಮುಳುಗಿಸುವರು. ಅವರು ಮುಳುಗುವ ಭಯದಿಂದ ತತ್ತರಿಸಿ ಮೇಲಕ್ಕೇಳುವಾಗ ಅವರನ್ನು ಅಪ್ಪಿಕೊಂಡು ಮುದ್ದಾಡುವರು. ಇವೆಲ್ಲ ಲೀಲಾ ವಿಲಾಸಗಳು ನಾಲ್ಕೈದು ಘಂಟೆ ಕಾಲ ನಡೆದರೂ ಅವರಿಗೆ ಬೇಸರವೇಉಂಟಾ ಗಲಿಲ್ಲ. ಆ ಮೇಲೆ ಜಲಕ್ರೀಡೆಯ ಶ್ರಮದಿಂದ ಅವರಿಗೆ ಹಸಿವೆ ಯುಂಟಾಗಲು ಕ್ರೀಡೆಯನ್ನು ನಿಲ್ಲಿಸಿ ದಡಕ್ಕೆ ಬಂದು ಉಡುಪು ಗಳನ್ನು ಧರಿಸಿಕೊಂಡರು. ತಾವು ಸಂಗಡ ತೆಗೆದುಕೊಂಡು ಬಂದ ಮೃಷ್ಟಾನ್ನಗಳನ್ನು ಒಂದೊಂದಾಗಿ ಊಟಮಾಡಿದರು. ಊಟದ ನಂತರ ಯಥೇಚ್ಛವಾಗಿ ಮದ್ಯವನ್ನು ಸೇವಿಸಿದರು. ಆಗ ಅವರು ಮದ್ಯದ ನಿಸೆಯಿಂದ ಮತ್ತರಾಗಿ ಬಾಯಿಗೆ ಬಂದಹಾಗೆ ಅವಾಚ್ಯ ವಚನಗಳನ್ನು ಆಡತೊಡಗಿದರು. ಕಮಾಲನು ಎಲ್ಲರಿಗಿಂತ ಹೆಚ್ಚಾಗಿ ಕೂಳನ್ನು ತಿಂದುದರಿಂದ ಮತ್ತು ಕೊಡಗಟ್ಟಲೆ ಸೆರೆಯನ್ನು ಕುಡಿದದ್ದ ರಿಂದ ಕಾಡುಮಿಕದಂತೆ ನೆಲದ ಮೇಲೆ ಉರುಳಾಡುತ್ತ ಸ್ಮೃತಿಗೆಟ್ಟು ತೊದಲು ಮಾತಿನಿಂದ,

"ಈ ಚಲಮುರದವ್ವ........ನೀ........ಕೈಲಾಸ ತೋರಸತೀದಿ
........ನಿನಗಿಂತ ದೊಡ್ಡವರಿಲ್ಲ........ಈ ಚಲಮುರದವ್ವ!

ಎಂದು ಒದರುತ್ತಿರುವಾಗ ವನಪ್ರದೇಶದ ಕಾವಲುಗಾರನೊಬ್ಬನು ಹಂದಿಯಂತೆ ಹೊರಳಾಡುತ್ತಿದ್ದ ಕಮಾಲನ ಅವಿಚಾರವನ್ನು ಕಂಡು ಕಾಲಿನಿಂದ ಅವನನ್ನು ಒದ್ದನು. ಒದಿಕೆಯ ಪೆಟ್ಟಿನಿಂದ ಕಮಾಲನು 'ಹುಂಯ್' ಎಂದು ಕೂಗಿಕೊಂಡು ಕರಡಿಯಂತೆ ಚೀತರಿಸಿಕೊಂಡು ಎದ್ದು ಕುಳಿತನು. ಆಗ ಕಾವಲುಗಾರನು, "ನೀವು ಎಲ್ಲಿಯವರು? ನೀವು ಮಾಡುವ ಅವಿಚಾರವಿದೇನು?" ಎಂದು ಕೇಳಿದನು. ಅದಕ್ಕೆ

ಕಮಾಲನು, "ನಾವು—ಮನಸೇರು........ ಪಟ್ಟಣ ಐತಲ್ಲಾ, ಅಲ್ಲಿಂದ ಬಂದೇವಿ, ಮಜ್ಯಾ ಮಾಡಾಕ ಬಂದೇವಿ, ಇದರಾಗೇನೈತಿ ಅವಿಚಾರ! ಇದನ್ನ ಕೇಳಾಕ ನೀ ಯಾರೋ ಮಗನ? ಎಂದ. ಆಗ ಕಾವಲುಗಾರನು ಮತ್ತಷ್ಟು ರೇಗಿ ಕಮಾಲನನ್ನು ಸಾಧುವಿನ ಶಿಷ್ಯರಹತ್ತಿರಕ್ಕೆ ಎಳೆದೊಯ್ದನು.

ಈ ಸಂಗತಿಯು ಜರುಗಿದವೇಳೆಯಲ್ಲಿ ದುರಂಧರನೂ ಅವನ ಮಂಡಲಿಯೂ ಸುರಾಪಾನದ ಮದದಿಂದ ಎಚ್ಚರತಪ್ಪಿದವರಾಗಿದ್ದರು. ಒಂದೆರಡು ಘಂಟೆಗಳನಂತರ ಅವರಿಗೆ ಸ್ಮೃತಿಯುಂಟಾಯಿತು. ಆಗ ಅವರು ಮತ್ತೊಂದು ವಿಲಾಸದ ಕಾರ್ಯಕ್ರಮಕ್ಕೆ ಮನಸ್ಸುಮಾಡಿ ನರ್ತಕಿಯರ ಗಾನ, ನರ್ತನಗಳನ್ನು ಪ್ರಾರಂಭಿಸಿದರು. ಈ ಸಮಾರಂಭವು ನಡೆದಾಗ ವಿಲಾಸದ ಮಂಡಲಿಯು ನಡುನಡುವೆ ತಮ್ಮ ಆನಂದ ವ್ಯಕ್ತಮಾಡುತ್ತಿದ್ದ 'ಭಲೆ-ಶಹಬಾಷ್' ಎಂಬ ಶಬ್ದಗಳು ಸಾಧುವಿನ ಗವಿಯಲ್ಲಿ ಸಹ ಪ್ರತಿಧ್ವನಿಯನ್ನುಂಟುಮಾಡುತ್ತಿದ್ದವು. ಈ ಪ್ರತಿಧ್ವನಿ ಗಳು ಸಾಧುವಿನ, ಮೌನ, ಧ್ಯಾನ, ಧಾರಣ, ಸಮಾಧಿವೃತ್ತಿಗಳಿಗೆ ಆತಂಕವನ್ನುಂಟುಮಾಡಲು ಕಾರಣವಾದವು. ಇಷ್ಟರಲ್ಲಿ ಒಬ್ಬ ಕಾವಲುಗಾರನು ಕಮಾಲನನ್ನು ಹಿಡಿದುಕೊಂಡುಬಂದು ಸಾಧುವಿನ ಗವಿಯ ಸಮೀಪಕ್ಕೆ ತಂದನು. ಸಾಧುವಿನ ಶಿಷ್ಯರೆಲ್ಲರು ಕಾವಲುಗಾರ ನಿಂದ ಎಲ್ಲ ಸಂಗತಿಗಳನ್ನು ಅರಿತುಕೊಂಡರು. ಸಾಧುವು ಧ್ಯಾನದ ಆಸನದಲ್ಲಿದ್ದುದರಿಂದ ಶಿಷ್ಯರು ಸಾಧುವಿಗೆ ತಿಳಿಸದೆ ನದಿಯ ಘಟ್ಟದಲ್ಲಿದ್ದ ಮಂಡಳಿಯ ಹತ್ತರಕ್ಕೆ ಬಂದರು. ಅಲ್ಲಿ ನಡೆದ ಗಾಯನ, ನರ್ತನ, ಸೆರೆಯ ದುರ್ವಾಸನೆ, ಮಾಂಸದ ಆಹಾರ, ತಿಂದು ಚಲ್ಲಿದ ಮುಸುರೆ, ಒಡೆದು ಬಿದ್ದ ಸೆರೆ ಸೀಸೆಗಳ ತುಣುಕು ಮುಂತಾದುದನ್ನು ನೋಡಿ ಶಿಷ್ಯರು ಹೇಸಿದರು. ಆ ಮಂಡಲಿಗೆ ತಾವೇ ಬುದ್ಧಿವಾದವನ್ನು ಹೇಳುವದು ಉತ್ತಮ ವಲ್ಲವೆಂದು ಅವರು ಬಗೆದು ಕಾವಲುಗಾರನಿಂದ ಕಮಾಲನ ಬಂಧನ ವಾಗಿರುವದೆಂದು ತಿಳಿಸಿ ಸುಮ್ಮನೆ ಆಶ್ರಮಕ್ಕೆ ಮರಳಿ ಹೊರಟರು.

ಕಮಾಲನ ಬಂಧನವಾಗಿರುವದೆಂಬ ವಾರ್ತೆಯನ್ನು ಕೇಳಿ ದುರಂಧ ರನು ಗಾಯನ, ನರ್ತನಗಳ ಸಮಾರಂಭವನ್ನು ನಿಲ್ಲಿಸಿದನು. ತನ್ನ ಮಿತ್ರ

ಮಂಡಲಿಯೊಡನೆ ಕಮಾಲನನ್ನು ಬಿಡುಗಡೆಮಾಡಿಸಿಕೊಂಡು ಬರುವದಕ್ಕೆ ಕಾವಲುಗಾರನನ್ನು ಹಿಂಬಾಲಿಸಿದನು. ದುರಂಧರನ ವಿನೋದ ಕಾರ್ಯಗಳಲ್ಲಿ ಕಮಾಲನು ಮುಖ್ಯ ಮುತಾಲಿಕನಾಗಿದ್ದನು. ದುರಂಧರನನ್ನು ಬಿಟ್ಟರೆ ಕಮಾಲನು ಮುಖ್ಯ ಮುತಾಲಿಕನಾಗಿದ್ದನು. ದುರಂಧರನನ್ನು ಬಿಟ್ಟರೆ ಕಮಾಲನ ಉಪಜೀವನವೇ ಸಾಗುವಂತಿದ್ದಿಲ್ಲ. ಅವರೀರ್ವರಗೆಳೆತನವು ರಾಹುಕೇತುಗಳಂತೆ ಸುಜನರ ಮೇಲೆ ಅಪಾಯವನ್ನು ಬಗೆಯುವದಾಗಿತ್ತು. ದುರಂಧರನ ದುಷ್ಟ ಹೇತುಗಳನ್ನೆಲ್ಲ ಕಮಾಲನು ಎಲ್ಲ ನೀಚೋಪಾಯಗಳಿಂದ ಸಾಧಿಸಿ ಕೊಡುತ್ತಿದ್ದನು. ದುರಂಧರನ ತಂದೆಯು ಮರಣ ಹೊಂದಿದ ತರುವಾಯ ಸೇವಕನಿದ್ದ ಕಮಾಲನು ಮುಖ್ಯ ಮಂತ್ರಿಯ ಸ್ಥಾನಕ್ಕೆ ಬಂದನು. ಖಜಾನೆಯ ಕೀಲಿಕೈ ಅವನ ಕೈಯಲ್ಲಿ ಬಂದ ಆದಾಯವನ್ನಿಟ್ಟು ಕೊಳ್ಳುವವನು ಅವನೇ; ಎಲ್ಲ ಖರ್ಚಿನ ಬಾಬುಗಳಿಗೆ ಹಣ ಕೊಡುವವನು ಅವನೇ, ಖಜಾನೆಯಲ್ಲಿ ಹಣ ತೀರಿದಾಗ ಬ್ಯಾಂಕಿನ ಮೇಲೆ ಚಕ್ಕು ತೆಗೆದು ದುರಂಧರನ ಸಹಿ ಹಾಕಿಸಿಕೊಂಡು ಹಣ ತರಿಸುವವನು ಅವನೇ. ಕಮಾಲನು ಮೂರ್ಖನಾಗಿದ್ದರೂ, ಎಷ್ಟೇ ದುಷ್ಟನಾಗಿದ್ದರೂ ಒಡೆಯನ ಹಣವನ್ನು ದುರುಪಯೋಗಮಾಡುತ್ತಿರಲಿಲ್ಲ ಅವನು ಜಾಗ್ರತನಾಗಿರುವಾಗಲೆಲ್ಲ ಯಾರಿಗೂ ತನ್ನ ಬಕ್ಕಣಕ್ಕೆ ಕೈಹಾಕಗೊಡುತ್ತಿರಲಿಲ್ಲ. ಆದರೆ ನಿಸೆಯಿಂದ ಸ್ಮೃತಿ ತಪ್ಪಿದಾಗ ಸೂಜಿಯಿಂದ ಚುಚ್ಚಿದರೂ ಅವನಿಗೆಪರವೆಯಿರುತ್ತಿರಲಿಲ್ಲ ಸ್ವಲ್ಪದಲ್ಲಿ ಹೇಳಬೇಕಾದರೆ ಅವನು ದುರಂಧರನಿಗೆ ಜೀವದ ಗೆಳೆಯನಾಗಿದ್ದನು.

## ಪ್ರಕರಣ ೮

# ಸಾಧುವಿನ ಸದುಪದೇಶ

ದುರಂಧರನು ಆಶ್ರಮಕ್ಕೆ ಬಂದ ದಿನವು ಶ್ರಾವಣ ಸೋಮವಾರವಿತ್ತು. ಅಂದು ಸಾಧುವಿನ ಪ್ರವಚನದ ದಿನ. ಆದುದರಿಂದ ಆ ದಿನದ ಸಂಧ್ಯಾಕಾಲದ ಉಪದೇಶವನ್ನು ಕೇಳಲು ಸಾವಿರಾರು ಜನರು ನೆರೆದಿ

ದ್ದರು. ದುರಂಧರನ ಮಂಡಲಿಯು ಕಮಾಲನನ್ನು ಬಿಡುಗಡೆಮಾಡಿ ಕೊಂಡು ಬರಲು ಸಾಧುವಿನ ಆಶ್ರಮಕ್ಕೆ ಹೋಗಬೇಕಾಯಿತೇ ಹೊರತು ಉಪದೇಶವನ್ನು ಕೇಳಲು ಹೋದದ್ದಲ್ಲ. ಈ ಮಂಡಲಿಯು ಗವಿಯ ಮುಂದಿನ ವಿಶಾಲವಾದ ಆಲದ ಮರದ ಅಡಿಯಲ್ಲಿ ಕುಳಿತ ಶ್ರೋತೃಗಳ ಸಮುದಾಯವನ್ನು ಸೇರಿ ಎಲ್ಲಕ್ಕೂ ಮುಂದಿನ ಪಂಕ್ತಿಯಲ್ಲಿ ಕುಳಿತು ಕೊಂಡಿತು. ಅದೇ ಆಗ ಸಾಧುವಿನ ಪ್ರವಚನವು ಪ್ರಾರಂಭವಾಗಿತ್ತು. ಆ ದಿನದ ವಿಷಯವು "ಮಾನವನ ಸದ್ಗತಿ" ಎಂಬದಾಗಿತ್ತು. ಸಾಧು ವಿನ ಎದುರಿನಲ್ಲಿ ಬಂದು ಕುಳಿತಮಂಡಲಿಯು, ಅವರ ಉಡಿಗೆಯಿಂದ, ಮುಖ ಲಕ್ಷಣಗಳಿಂದ, ಒರಟು ವರ್ತನದಿಂದ ಸಾಧುವಿನ ಲಕ್ಷವನ್ನೆಳೆ ಯಿತು. ಅವರು ಉಳಿದ ಶ್ರೋತೃವೃಂದದಿಂದ ತೀರ ಭಿನ್ನರಾಗಿರು ವದು ಒಡೆದು ಕಾಣುತ್ತಿತ್ತು. ಸಾಧುವು ವಿಶೇಷವಾಗಿ ಅವರ ಮನ ಸ್ಸನ್ನು ತಿರುಗಿಸುವ ಉದ್ದೇಶದಿಂದ ಪ್ರವಚನವನ್ನು ಹೇಳಬೇಕೆಂದು ನಿರ್ಧರಿಸಿದನು.

ಸಾಧು (**ಕೇಳುವ ಸಭಿಕರನ್ನುದ್ದೇಶಿಸಿ**), "ಮಹಾಶಯರೇ, ಸೃಷ್ಟಿಯು ದೇವರ ಲೀಲಾಕೃತಿಯ ಕೈವಾಡವು. ದೇವನು ಜೀವಿಗಳನ್ನು ನಿರ್ಮಿಸಿ ಮನಸ್ಸು, ಹೃದಯ ಬುದ್ಧಿ, ಕ್ರಿಯಾಸ್ವಾತಂತ್ರ್ಯಗಳನ್ನು ದಯಪಾಲಿಸಿ ಕಳುಹುತ್ತಾನೆ. ಪ್ರತಿಯೊಂದು ಪ್ರಾಣಿಯು ಒಳ್ಳೇದನ್ನಾ ಗಲಿ ಕೆಟ್ಟದ್ದನ್ನಾಗಲಿ ಮಾಡಲು ಸ್ವತಂತ್ರ ಉಳ್ಳದ್ದು. ಪ್ರತಿಯೊಂದು ಪ್ರಾಣಿಯಲ್ಲಿಯೂ ಇದು ಒಳಿತು, ಇದು ಕೆಟ್ಟದು ಎಂಬ ವಿಚಾರವನ್ನು ಸೂಚಿಸಲು ಅಂತರಾತ್ಮವಿರುವದು. ಪ್ರತಿಯೊಂದು ಕೃತಿಯನ್ನು ಮಾಡುವ ಮೊದಲು ಈ ವಿವೇಕವು ಉದಯವಾಗುತ್ತಿದ್ದಾಗ್ಯೂ ಮನು ಷ್ಯನು ಮೋಹದ ಮುಸುಕಿನಿಂದ ಮುಚ್ಚಲ್ಪಟ್ಟವನಾಗಿ ಅಹಿತವಾದ ಅನಾಚಾರವನ್ನೆಸಗುತ್ತಾನೆ. ದೇವನು ಕೇವಲ ಸಾಕ್ಷಿರೂಪನೂ, ನ್ಯಾಯ ಮೂರ್ತಿಯೂ, ಸುಕೃತ, ದುಷ್ಕೃತಗಳಿಗೆ ಸರಿಯಾದ ಫಲವನ್ನು ಕೊಡು ವವನಾಗಿರುವನೇ ಹೊರತು ಯಾರಿಗೂ ಪಕ್ಷಪಾತ ತೋರಿಸುವದಿಲ್ಲ. ಮನುಷ್ಯನು ತಾನು ಬಿತ್ತಿದ್ದನ್ನು ಬೆಳೆಯುವನು, ಮಾಡಿದ್ದನ್ನು ಉಣ್ಣು

ವನು; ಸತ್ಕಾರ್ಯದ ಫಲವಾಗಿ ಸುಖವನ್ನೂ, ದುಷ್ಕಾರ್ಯದ ಪರಿಣಾಮವಾಗಿ ದುಃಖವನ್ನೂ ಅನುಭೋಗಿಸುವನು.

ಪ್ರತಿಯೊಂದು ಪ್ರಾಣಿಯು, ಮುಖ್ಯವಾಗಿ ಮನುಷ್ಯನು ದೇವರ ಕೈಯೊಳಗಿನ ಸೂತ್ರದ ಗೊಂಬೆಯಾಗಿರದೆ ತಾನು ಇಚ್ಛಿಸಿದ ಪ್ರಕಾರ ವರ್ತಿಸುವ ಪೂರ್ಣಸ್ವಾತಂತ್ರ್ಯವುಳ್ಳವನು. ತಾನು ಮಾಡುವ ಕೃತಿಗಳಿಗೆ ತಾನೇ ಹೊಣೆಗಾರನು. ತನ್ನ ಅದೃಷ್ಟವನ್ನು ನಿರ್ಮಿಸಿಕೊಳ್ಳುವವನು ತಾನೇ. ಸದ್ಯದಲ್ಲಿ ಮಾಡಿದ ಕೃತಿಗಳ ಪರಿಣಾಮವೇ ಮುಂದಿನ ಅದೃಷ್ಟವಾಗುವದು. ಅದರಲ್ಲಿ ದೇವರ ಕೈವಾಡವೇ ಇರುವದಿಲ್ಲ. ಮನುಷ್ಯನಿಗೆ ಅನಾಹುತಗಳಾಗಲಿ ಸಂಕಟಗಳಾಗಲೀ, ಪರಿಣಮಿಸಿದರೆ ಅವು ನಿಷ್ಕಾರಣವಾಗಿ ಬಂದವೆಂದು ತಿಳಿಯಬಾರದು. ತಾನು ಹಿಂದೆ ಮಾಡಿದ ಕರ್ಮಗಳ ಫಲವಾಗಿಯೇ ಅವು ಸಂಭವಿಸುವವು. ದೇವರು ಈ ಬಗೆಯ ಕ್ರಮ ನಿಯಮವನ್ನು ಸೃಷ್ಟಿಯಲ್ಲಿ ರಚಿಸಿರುವನು. ಇದು ಎಂದೂ ಬದಲಾಗದು. ಈ ನಿಯಮಕ್ಕನುಸಾರವಾಗಿಯೇ ಎಲ್ಲ ವ್ಯವಹಾರಗಳು ಸಾಗಿರುವವು. ಸೂರ್ಯ, ಚಂದ್ರರೂ ಪಶ್ಚಿಮದಲ್ಲಿ ಎಂದೂ ಉದಯವಾಗಲಾರರು. ಜಾಲಿಯ ಮರದಲ್ಲಿ ಮಾವಿನಹಣ್ಣು ಅಂಕುರಿಸಲಾರದು. ಬಾಳೆಯ ಗಿಡದಲ್ಲಿ ಜಾಲಿಯ ಮುಳ್ಳು ಹೊರಸೂಸಲಾರದು. ಹಾಗೆಯೇ ಮನುಷ್ಯನಿಂದ ಯಾವ ವಿಧದ ಕರ್ಮ ಸಂಭವಿಸಿರುವದೋ ಅದೇ ವಿಧದ ಪರಿಣಾಮಗಳುಂಟಾಗುವವು. ಕಾರಣವಿಲ್ಲದೆ ಯಾವ ಪರಿಣಾಮವೂ ಘಟಿಸದು. ಆದುದರಿಂದ ಮನುಷ್ಯನು ತನ್ನ ಅದೃಷ್ಟವನ್ನು ತಾನೇ ರಚಿಸಿಕೊಳ್ಳುವನು. ಪೂರ್ವಜನ್ಮದ ಅಥವಾ ಈಗಿನ ಜನ್ಮದ ಮೊದಲಿನ ಕೃತಿಗಳ ಫಲವಾಗಿ ಮನುಷ್ಯನು ಸುಖದುಃಖಗಳನ್ನು ಅನುಭವಿಸುತ್ತಾನೆ. ದು:ಖಗಳುಂಟಾದಾಗ ದೇವರ ಕೃಪೆ ತಪ್ಪಿತೆಂದು ದೈವವನ್ನು ದೂಷಿಸುತ್ತಾನೆ. ಆದರೆ ನಿಜವಾಗಿ ವಿಚಾರಿಸಿದಲ್ಲಿ ಒಬ್ಬನಿಗೆ ಬಂದ ವಿಪತ್ತುಗಳು ಆವನ ಪೂರ್ವಕರ್ಮದ ಫಲಗಳೇ ಹೊರತು ಬೇರೆ ಅಲ್ಲ

ಮನುಷ್ಯನು ತನ್ನ ಭವಿತವ್ಯವನ್ನು ಸುಖಮಯವಾಗಿಯೂ, ಪರಿಪೂರ್ಣವಾಗಿಯೂ, ಸಂಸಾರದ ಚಕ್ರದಿಂದ ಬಿಡುಗಡೆ ಮಾಡಿಕೊ

ಳ್ಳುವದಕ್ಕಾಗಿಯೂ ಸಾತ್ವಿಕ ವರ್ತನೆಯನ್ನು ಪಾಲಿಸಬೇಕು, ಸದುದ್ದೇಶ ಸದ್ಗುಣಗಳೆಂಬ ಬೀಜಗಳನ್ನು ಬಿತ್ತಬೇಕು; ದಯೆಯೆಂಬ ಗೊಬ್ಬರ ವನ್ನು ಹಾಕಬೇಕು; ಔದಾರ್ಯವೆಂಬ ನೀರನ್ನೆರೆಯಬೇಕು; ಸದಾಚಾರ ವೆಂಬ ಪಾತಿಯನ್ನು ಕಟ್ಟಬೇಕು. ಅದರ ಪರಿಣಾಮವಾಗಿ ಅವನಿಗೆ ಸುಖರೂಪದ ಫಲವು ಸಹಜವಾಗಿ ದೊರಕುವದು. ಯಾವನು ತನ್ನ ಮನಸ್ಸನ್ನು ವಶದಲ್ಲಿಟ್ಟುಕೊಳ್ಳುವದಿಲ್ಲವೋ ಅವನು ಬಿರುಗಾಳಿಯಲ್ಲಿ ಸಿಲುಕಿದ ನಾವೆಯಂತೆ ದಿಶೆತಪ್ಪಿ ನೂಕಲ್ಪಡುವನು. ಮನಸ್ಸು ವಿಷಯ ಸುಖಗಳನ್ನು ಬಯಸಿದಾಗ ಅದಕ್ಕೆ ಆ ಸುಖಗಳಲ್ಲಿ ಆಸಕ್ತಿಯುಂಟಾಗು ವದು. ಆಸಕ್ತಿಯಿಂದ ಆಶೆಯು ಬಲಿಯುವದು. ಆಶೆಯ ಮೂಲಕ ಆ ವಸ್ತುಸುಖವು ದೊರೆಯದೆ ಇರುವಾಗ ಉದ್ವೇಗವುಂಟಾಗುವದು. ಉದ್ವೇಗದ ಮುಖಾಂತರ ಮೋಹವಿಕಾರವುಂಟಾಗುವದು. ಮೋಹದಿಂದ ಬುದ್ಧಿಭ್ರಮೆಯುಂಟಾಗುವದು. ಬುದ್ಧಿಭ್ರಮೆಯಿಂದ ಮನುಷ್ಯನು ಅನೇಕ ವಿಧದ ಕೇಡುಗಳಿಗೆ ಈಡಾಗುವನು. ಆದುದರಿಂದ ಪ್ರತಿಯೊಬ್ಬನು ತನ್ನ ಮನಸ್ಸು ಯಾವಾಗಲೂ ಒಳ್ಳೇ ಮಾರ್ಗದಲ್ಲಿ ಚಲಿಸುವಂತೆ ಜಾಗ್ರತೆಯುಳ್ಳವನಾಗಿರಬೇಕು. ಮನಸ್ಸು ಮಂಗನಂತೆಯೂ, ಪಾರಜ ದಂತೆಯೂ, ಗಾಳಿಯಂತೆಯೂ, ಮಿಂಚಿನಂತೆಯೂ, ಲಕ್ಷ್ಮಿಯಂತೆಯೂ ಚಂಚಲವಾದದ್ದು. ಮನಸ್ಸು ತಾತ್ಕಾಲಿಕ ವಿಷಯ ಸುಖಕ್ಕೆ ಯಾವಾಗಲೂ ಹರಿಹಾಯುತ್ತಿರುವದು. ಮನಸ್ಸಿಗೆ ಮುಗದಾಣವನ್ನು ಬಿಗಿದು ಅದನ್ನು ವಿವೇಕದ ಕೈಯಲ್ಲಿಕೊಟ್ಟರೆ ಮನುಷ್ಯನ ಸನ್ಮಾರ್ಗವು ಸುರಕ್ಷಿತವಾಗುವದು.

ಮಾನವನ ಜೀವಿತಕಾಲದಲ್ಲಿ ತಾರುಣ್ಯವು ಬಹು ಗಂಡಾಂತರದ ಕಾಲವು. ಆಗ ಮನುಷ್ಯನಿಗೆ ಹೊಸ ಹುರುಪು, ದೇಹಬಲ, ಕಾಮ ವಾಸನೆ, ವಿಷಯ ಸುಖಾಭಿಲಾಷೆಗಳು ಉಕ್ಕುತ್ತಿರುವವು. ಆದರೆ ಅವನಲ್ಲಿ ಮನೋನಿಗ್ರಹ, ಆತ್ಮಬಲ, ನ್ಯಾಯಾನ್ಯಾಯ ವಿಚಾರ, ವ್ಯವಹಾರದ ಅನುಭವಗಳ ಅಭಾವವಿರುವದರಿಂದ ಅವನಿಂದ ಅನೇಕ ದೋಷಯುಕ್ತವಾದ ಕಾರ್ಯಗಳು ಜರುಗುವ ಸಂಭವವಿರುವದು. ಹರೆಯದ ಹುರುಪಿನಲ್ಲಿ ತಾನು ಮಾಡುವ ಕಾರ್ಯಗಳ ಪರಿಣಾಮ

ವೇನಾಗುವದೆಂಬದನ್ನು ಲಕ್ಷಿಸದೆ ತರುಣನು ಮುಂಗೋಪಿತನದಿಂದ ಕೆಲಸಮಾಡುವನು. ಹೀಗಾಗಿ ಅವನು ಅನೇಕ ವಿಪತ್ತುಗಳನ್ನು ತಾನೇ ಕಲ್ಪಿಸಿಕೊಳ್ಳುವನು. ಯೌವ್ವನಾವಸ್ಥೆಯಲ್ಲಿ ಕಾಮವಿಕಾರವು ಬಲವತ್ತರವಾಗಿರುವದು. ಯುವಕನು ಕಾಮತೃಪ್ತಿಯಕಡೆಗೆ ಮನಸ್ಸು ಹಾಕಿದರೆ ಕೆಲವು ಕಾಲದಲ್ಲಿ ಅವನ ದೇಹವು ಕುಂದುವದು. ವೀರ್ಯವು ನಾಶವಾಗುವದು. ವೀರ್ಯವು ಮನುಷ್ಯನ ತೇಜಸ್ಸಿಗೆ ಮುಖ್ಯ ಕಾರಣವು. ವೀರ್ಯನಾಶದಿಂದ ತರುಣನ ಮುಖವು ಬಾಡುವದು. ಗಲ್ಲಗಳು ಒಳಸೇರುವವು, ಕಣ್ಣುಗಳು ಒಳಸೇರುವವು, ತುಟಿಗಳು ಕಪ್ಪಾಗುವವು, ಮುಪ್ಪಿನವರ ಮುಖದಂತೆ ಚರ್ಮದ ನಿರಿಗೆಗಳು ಮುಖದಲ್ಲಿ ಮೂಡುವವು; ಅವಯವಗಳ ಕ್ಷೀಣತೆಯಿಂದ ಜೀರ್ಣಶಕ್ತಿಯು ಇಲ್ಲದಾಗುವದು. ಅದರಿಂದ ದೇಹಾಲಸ್ಯ, ಮನಸ್ಸಿನ ಮಂದಭಾವಗಳುಂಟಾಗುವವು. ಬೇನೆ, ಬೇಸರಿಕೆಗಳು ತಲೆದೋರುವವು. ದೇಹದಲ್ಲಿ ಆರೋಗ್ಯವಿಲ್ಲದಿರಲು ಮನೋಶಾಂತಿಯು ನಷ್ಟವಾಗುವದು. ಇವೆರಡೂ ಇಲ್ಲದಿರಲು ಎಷ್ಟು ಸಂಪತ್ತಿದ್ದರೂ ಅದರಿಂದ ಸುಖವು ದೊರೆಯಲಾರದು."

ಸಾಧುವು ಈ ಮಾತುಗಳನ್ನು ಹೇಳಿದಾಗ ಸಮೀಪದಲ್ಲಿ ಕುಳಿತಿದ್ದ ದುರಂಧರನು ಸಾಧುವನ್ನು ಪ್ರಶ್ನಿಸತೊಡಗಿದ.

ದುರಂಧರ—"ಹೌದು ಸ್ವಾಮೀ, ನೀವೇನೋ ಹೀಗೆ ಹೇಳುವಿರಿ. ಆದರೆ ಮನುಷ್ಯನಿಗೆ ತಾರುಣ್ಯವೆಂಬುದು ಒಂದೇಸಲ ಬರುವದು. ಆ ವಯಸ್ಸೊಂದೇ ಸುಖಭೋಗಿಸಲು ತಕ್ಕ ಸಮಯವು. ಆ ಸುಸಂಧಿಯನ್ನು ಕಳೆದುಕೊಂಡರೆ ಮುಂದೆ ಸುಖಪಡೆಯುವದೆಂದು? ಮನುಷ್ಯನು ಹುಟ್ಟಿರುವದು ಸುಖಪಡೆಯುವದಕ್ಕಾಗಿ ಅದನ್ನುಳಿದರೆ ಪ್ರಪಂಚದಲ್ಲಿದ್ದು ಪ್ರಯೋಜನವೇನು? ಸುಖಪಡೆಯದೆ ಶತವರ್ಷ ಬಾಳಿ ಫಲವೇನು? ಸುಖ ಹೊಂದಿ ಹಲವಾರು ವರ್ಷ ಬಾಳುವದು ಸಾರ್ಥಕವಲ್ಲವೇ? ಮನುಷ್ಯನಿಗೆ ಮುಂದಿನ ಜನ್ಮವಿದೆಯೆಂದು ಯಾರೂ ಕಂಡಿಲ್ಲ. ಸ್ವರ್ಗ, ನರಕಗಳು ಮನುಷ್ಯನ ಕಲ್ಪನೆಯ ಲೋಕಗಳು. ದೇವರಿರುವನೆಂಬ ನಂಬಿಗೆಯು ಒಂದು ಮಿಥ್ಯಾಭಾವನೆಯು. ಪ್ರತಿಕ್ಷಣದಲ್ಲಿ ಲಭಿಸುವ ಸುಖವನ್ನು ಅನುಭವಿಸದೇ ಬಿಡುವವನು ಮೂರ್ಖನಲ್ಲವೇ? ಮರಣ

ವುಂಟಾಗಿ ಮಣ್ಣುಪಾಲಾದ ಜೀವವು ಸುಖಪಡೆಯುವದೆಂತು? ಅದು ಮತ್ತೆ ಹುಟ್ಟಿ ಬರುವದಂತೂ ಅಸಾಧ್ಯ.

ಸಾಧು--"ನಿಜವಾದ ಸುಖವು ಯಾವದೆಂಬುದನ್ನು ತಿಳಿದುಕೊಂಡರೆ ಮನುಷ್ಯನಿಗೆ ಇಲ್ಲಿಯೇ ಶ್ರೇಯಸ್ಸು ಸಿಗುವದು. ಪರಲೋಕ, ಸ್ವರ್ಗ, ನರಕಗಳ ಕಲ್ಪನೆಯ ಗೊಡವೆಯೇಕೆ? ಬಹುಜನರು ಇಂದ್ರಿಯಗಳ ಮೂಲಕ ಉಂಟಾಗುವ ಸುಖವೇ ನಿಜವಾದ ಸುಖವೆಂದು ತಿಳಿದಿದ್ದಾರೆ. ಇಂದ್ರಿಯಗಳಿಂದಾಗುವ ಸುಖವು ಕ್ಷಣಿಕನಾದದ್ದು ಮತ್ತು ಪರಿಣಾಮದಲ್ಲಿ ದುಃಖವನ್ನುಂಟು ಮಾಡುವದು. ಮನುಷ್ಯನು ರತಿಸುಖವನ್ನು ಒಂದು ಕ್ಷಣ ಹೊತ್ತು ಅನುಭವಿಸುವನು. ಮರುಕ್ಷಣವೇ ಅವನಿಗೆ ಆಯಾಸ ಹಾಗು ಅಸಹ್ಯಭಾವನೆಯೆನಿಸುವದು. ರತಿಸುಖದಲ್ಲಿ ನಿರಂತರ ನಿರತನಾದವನಿಗೆ ಸ್ವಲ್ಪ ಕಾಲದಲ್ಲಿ ದೇಹಬಲ, ಮನೋಬಲಗಳು ನಾಶವಾಗಿ ಸುಖದ ಬದಲು ಅಪಾರವಾದ ದೌರ್ಬಲ್ಯ, ದುಃಖಗಳು ಸಂಭವಿಸುವವು. ರತಿಸುಖದಲ್ಲಿ ನಿಗ್ರಹವುಳ್ಳವನಿಗೆ ದೇಹಬಲವಿರುವದರಿಂದ ಅವನ ಮನಸ್ಸು ಹರ್ಷವುಳ್ಳದ್ದು, ಪ್ರಸನ್ನವಾದದ್ದು ಇರುವದು. ಆದುದರಿಂದ ಇಂದ್ರಿಯಗಳ ಸುಖಕ್ಕಿಂತ ಮನಸ್ಸಿನ ಮೂಲಕವುಂಟಾಗುವ ಹರ್ಷವು ಶಾಶ್ವತವಾದದ್ದು; ಮೇಲಾದದ್ದು. ಮನಸ್ಸು ಸಹ ಇಂದ್ರಿಯಗಳಲ್ಲಿ ಒಂದು ಮೇಲ್ತರದ ಇಂದ್ರಿಯವಾಗಿರುವದರಿಂದ ಮನಸ್ಸಿನ ಸುಖಕ್ಕಿಂತಲೂ ಆತ್ಮ ಸಂಧಾನದಿಂದಾಗುವ ಸುಖವು ಶ್ರೇಷ್ಠವಾದದ್ದು. ಆತ್ಮ ಸ್ವರೂಪವನ್ನು ಅರಿತುಕೊಂಡಾಗ ಇಂದ್ರಿಯ ಮನಸ್ಸುಗಳಿಂದಾಗುವ ಸುಖಗಳು ಕೀಳು ತರಗತಿಯವೆಂದು ಅನುಭವವುಂಟಾಗುವದು. ಆತ್ಮ ಜ್ಞಾನದಿಂದಾಗುವ ಸುಖಕ್ಕೆ ಆನಂದವೆಂಬ ವಿಶಿಷ್ಟವಾದ ಹೆಸರುಂಟು.

ಮನುಷ್ಯನು ಮೋಹದ ಅಂಧಕಾರದಲ್ಲಿ ಸ್ತ್ರೀಯ ರೂಪಕ್ಕೆ ಮರುಳಾಗಿ ಪತಂಗದ ಹುಳವು ದೀಪದ ಪ್ರಕಾಶಕ್ಕೆ ಮರುಳಾಗಿ ಅದರಲ್ಲಿ ಧುಮುಕಿ ಸಾಯುವಂತೆ, ತನ್ನ ನಾಶವನ್ನುಂಟುಮಾಡಿಕೊಳ್ಳುತ್ತಾನೆ. ಹೆಣ್ಣಿನ ದೇಹವು ಮಾಂಸ, ಮಲ, ಮೂತ್ರ, ರಕ್ತ, ಕಫ ಮುಂತಾದ ಹೇಯವಾದ ವಸ್ತುಗಳ ಸ್ಥಾನವು. ಇವುಗಳ ಮೇಲೆ ಚರ್ಮದ ಹೊದಿಕೆ

ಯಿದೆ. ದೇಹವೆಲ್ಲ ಎಲುಬಿನ ಹಂದರವಾಗಿದೆ. ಮುಖದಲ್ಲಿ ಯಾದರೋ ಎಲುಬು, ರಕ್ತ, ಮಾಂಸಗಳೇ ತುಂಬಿರುವವು. ಕವಿಗಳು ಸ್ತ್ರೀಯರ ಮುಖಗಳನ್ನು ಕಮಲ ಮತ್ತು ಚಂದ್ರನಿಗೆ ಹೋಲಿಸಿ ವರ್ಣಿಸಿದ್ದಾರೆ. ನಿಜವಾಗಿ ನೋಡಿದಲ್ಲಿ ಅಲ್ಲಿ ಯಾವ ನೋಟವನ್ನಿರಿಸಲೂ ಅದು ತಕ್ಕ ಸ್ಥಾನವಾಗಿರುವದಿಲ್ಲ. ಕೇವಲ ಪುತ್ರ ಸಂತಾನ ಲಾಭಕ್ಕಾಗಿ ಸಂಭೋಗವು, ಮಿತಿಯುಳ್ಳದ್ದಾಗಿರಬೇಕೆಂದು ಪೂರ್ವದ ಜ್ಞಾನಿಗಳು ಹೇಳಿದ್ದಾರೆ. ಪ್ರತಿಯೊಬ್ಬನು ತನ್ನ ಸತಿಯೊಡನೆ ಸಹ ಮಿತಭೋಗಿಯಾಗಿರಬೇಕು, ಉಳಿದ ಸ್ತ್ರೀಯರನ್ನು ಮಾತೃಸಮಾನರೆಂದು ಭಾವಿಸಬೇಕು. ಕಾಮವಿಕಾರದಿಂದ ಅನ್ಯಸ್ತ್ರೀಯರನ್ನು ನೋಡುವುದು ಸಹ ಪಾಪವು. ಹಾಗೆ ನೋಡುವದರಿಂದ ವೀರ್ಯ ಸ್ಖಲನವಾಗುವದು. ಅದರ ಪರಿಣಾಮವು ಪ್ರತ್ಯಕ್ಷ ಭೋಗ ಮಾಡಿದಷ್ಟೇ ಇರುವದು.

ತಾರುಣ್ಯದಲ್ಲಿ ಸಂಸಾರದ ಹೊಣೆಗಾರಿಕೆಯುಂಟಾಗಿರುವದಿಲ್ಲ. ಸ್ವತಃ ದುಡಿದು ಹಣ ಸಂಪಾದಿಸದವರಲ್ಲಿ ಶ್ರಮವೆಷ್ಟಿರುವದೆಂಬ ಕಲ್ಪನೆಯಿರುವದಿಲ್ಲ. ಹಿರಿಯರು ಗಳಿಸಿಟ್ಟ ಹಣವನ್ನು ದುಂದುಗಾರಿಕೆಯಿಂದ ಖರ್ಚುಮಾಡುವದರಲ್ಲಿ ತರುಣನಿಗೆ ಮುಂದಿನ ಅವಸ್ಥೆಯ ವಿಚಾರವೇ ತಲೆಯಲ್ಲಿ ಬರುವದಿಲ್ಲ. ತರುಣನು ಲಗ್ನವಾದ ಮೇಲೆ ಒಂದೆರಡು ಮಕ್ಕಳನ್ನು ಪಡೆದಾಗ ಹೆಂಡತಿ-ಮಕ್ಕಳನ್ನು ರಕ್ಷಣೆ ಹೇಗೆ ಮಾಡಬೇಕೆಂಬ ವಿಚಾರವು ತಲೆದೋರುವುದು. ಹಣ ಗಳಿಸುವದು ಎಷ್ಟು ಕಷ್ಟಮಯವಾದದ್ದೆಂಬುದು ಆಗ ಅವನಿಗೆ ವೇದ್ಯವಾಗುವದು. ದುಡಿದ ದ್ರವ್ಯವು ಮನೆತನದ ಊಟ, ಉಡಿಗೆಗಳಿಗೆ ಸಾಲದ ಹಾಗಾದಾಗ ಅವನು ಸಿಟ್ಟುಸಿರುಬಿಡುತ್ತ ಕೂಡ್ರುವನು. ಅವನು ಕಾಮತೃಪ್ತಿಗಾಗಿ ಸಂಭೋಗ ಸಾಗಿಸುತ್ತಿರಲು ನಾಲ್ಕೆಂಟು ಮಕ್ಕಳಾಗಿ ಕುಟುಂಬವು ಬಲಿತಾಗ ಅವನು ಅವರೆಲ್ಲರನ್ನು ರಕ್ಷಿಸುವ ಭಾರವನ್ನು ತಾಳಲಾರದೆ ಚಿಂತೆಹಚ್ಚಿಕೊಂಡು ಕೊರಗಿ ಕಡ್ಡಿಯಂತಾಗುವನು. ತಾರುಣ್ಯಕಾಲದಲ್ಲಿದ್ದ ಉತ್ಸುಕತೆ, ದುಂದುಗಾರಿಕೆ, ಕಾಮವಿಕಾರ, ದುಡುಕುತನಗಳು ಅಡಗಿಹೋಗಿ ಅವುಗಳ ಬದಲು ಆಲಸ್ಯ, ಮಿತವ್ಯಯ, ಇಂದ್ರಿಯನಿಗ್ರಹ, ಮುಂದಾಲೋಚನೆಗಳು ಅವನಲ್ಲಿ ಒಡ

ಮೂಡುವವು. ಆಗ ಅವನು ಸಂಸಾರವು ನಿಸ್ಸಾರವಾದದ್ದೆಂದು ಮನ ಗಾಣುವನು. ಸಂಸಾರಿಯಾಗಿರುವದಕ್ಕಿಂತಲೂ ಏಕಾಕಿಯಾಗಿರುವದು ಮೇಲೆಂದು ನಿರಾಶಾವಾದವನ್ನು ವ್ಯಕ್ತಮಾಡುವನು.

ತಾರುಣ್ಯ ಮತ್ತು ಮಧ್ಯ ವಯಸ್ಸು ಮೀರುತ್ತ ಹೋದ ಹಾಗೆ ಮನುಷ್ಯನಿಗೆ ಚಿಂತೆಗಳು ಹೆಚ್ಚಾಗುವವು. ಆಗ ಅವನ ಕುಟುಂಬವು ಸಾಕಷ್ಟು ದೊಡ್ಡದಾಗಿರುವದು. ಹೆಂಡತಿಯು ತನಗಿಂತ ಭಿನ್ನಾಭಿ ಪ್ರಾಯವುಳ್ಳವಳಾದಾಗ ಅದರಿಂದಾದ ತಾಪ, ಮಕ್ಕಳು ಮಾತು ಕೇಳ ದವರಾದಾಗ ಮತ್ತೊಂದು ಚಿಂತೆ, ರೋಗರುಜೆಗಳುಂಟಾದಾಗ ಸಾವಿನ ಚಿಂತೆ, ಹಣವಂತನಿರುವಾಗ ಕಳ್ಳರ ಭಯದ ಚಿಂತೆ, ಆಪ್ತರು ಹಣ ಬೇಡಿದಾಗ ಕೊಡದಿರಲು ಅದರಿಂದಾಗುವ ಅಹಿತದ ಚಿಂತೆ, ತನ್ನ ಅಭಿ ವೃದ್ಧಿಯನ್ನು ನೋಡಿ ಸಹಿಸದೆ ಎಡರುಗಳನ್ನೊಡ್ಡುವ ನಿಷ್ಕಾರಣ ವೈರಿ ಗಳ ಚಿಂತೆ, ಪಶುಗಳ, ವಾಹನಗಳ, ನೀರು, ಬೆಂಕಿ, ಸಿಡಿಲು ಮುಂತಾದ ಸೃಷ್ಟಿಯ ಶಕ್ತಿಗಳ ಮೂಲಕ ಘಟಿಸುವ ಆಕಸ್ಮಿತ ಅನಾಹುತಗಳಿಂದುಂ ಟಾಗುವ ತಾಪ; ಸಮಾಜದಲ್ಲಿ ನಾಲ್ಕು ಜನರ ಅನುಮತಿಯಂತೆ ಆಚರಿ ಸದಿದ್ದರೆ ಸಮಾಜವು ಹಾಕುವ ಬಹಿಷ್ಕಾರದ ಭವಣೆ; ರಾಜ್ಯಶಾಸನಗಳ ಉಲ್ಲಂಘನೆ ಮಾಡಿದಾಗ ಶಿಕ್ಷೆಹೊಂದಿ ಸಿಡಿಮಿಡಿಗೊಳ್ಳುವ ಸಂತಾಪ; ಬಡತನವುಂಟಾಗಿರಲು ನೆರೆಹೊರೆಯವರು ನೆಮ್ಮದಿಯಾಗಿರುವುದನ್ನು ನೋಡಿ ಮನದಲ್ಲಿ ಮರುಗುವ ಚಿಂತೆ; ಚಳಿ, ಮಳೆಗಳಿಂದ ರಕ್ಷಿಸಿ ಕೊಳ್ಳಲು ಸರಿಯಾದ ಮನೆಮಾರುಗಳೂ, ಬಟ್ಟೆಬರೆಗಳೂ ಇಲ್ಲದಿರಲು, ಹೊಟ್ಟೆಗೆ ಸಾಕಷ್ಟು ಅನ್ನದೊರೆಯದಿರಲು ಅದರಿಂದಾಗುವ ದೇಹಬಾಧೆ; ದುಡಿಯಬೇಕೆಂದು ಹುಮ್ಮಸವಿರುವಾಗ ಕೂಲಿಯಕೆಲಸವೇ ದೊರಕದಿ ರಲು ಅದರಿಂದಾಗುವ ಉತ್ಸಾಹಭಂಗ; ಬಡತನದ ಮೂಲಕ ಹಣವಂತರು ತನ್ನನ್ನು ಅನಾದರದಿಂದ ಕಂಡಾಗ ಆಗುವ ಮನೋವ್ಯಥೆ, ಬಲವಂತರು ತನಗೆ ಅನ್ಯಾಯಮಾಡಿದಾಗ ಅಥವಾ ಕಾರಣವಿಲ್ಲದೆ ಅವಾಚ್ಯ ಶಬ್ದಗಳನ್ನು ಆಡಿದಾಗ ತಾನು ಪ್ರತಿಕ್ರಿಯೆಮಾಡಲು ಸಮರ್ಥನಾಗದೆ ಅಂತರಂಗದಲ್ಲಿ ಬೆಂದು ಬೆಂಡಾಗುವ ಪರಿತಾಪ.

ಮುಪ್ಪಿನ ಕಾಲದಲ್ಲಿ ಎಲ್ಲ ಅವಯುವಗಳು ಜೀರ್ಣವಾಗುವವು. ತಲೆ, ಕೈಕಾಲುಗಳು ನಡುಗುವವು, ಬೆನ್ನು ಬಾಗುವದು, ಚಿತ್ತದ ಬಿಗುವಿಲ್ಲದೆ ನಿಲ್ಲಲು ಸಹ ಬರುವದಿಲ್ಲ; ಕಣ್ಣುಗಳು ಮಂದವಾಗಿ ಮುಂದಿನ ವಸ್ತುಗಳು ಕಾಣದಂತಾಗುವವು; ಹಲ್ಲುಗಳು ಉದುರಿ ಬಾಯಿ ಬರಿದಾಗುವದು; ಜಡಪದಾರ್ಥಗಳನ್ನು ಜಗಿಯುವದು ಅಸಾಧ್ಯವಾಗುವದು; ಊಟಮಾಡಿದ ಅನ್ನವು ಜೀರ್ಣವಾಗದು; ಮಲಬದ್ಧತೆಯಿಂದ ದೇಹದಲ್ಲಿ ಆಲಸ್ಯವುಂಟಾಗುವದು. ದೇಹಾಲಸ್ಯದಿಂದ ಮನಸ್ಸು ಸಹ ಕುಗ್ಗಿ ನಿರುತ್ಸಾಹವುಳ್ಳದ್ದಾಗುವದು. ದೇಹ ಮನಸ್ಸುಗಳ ದೌರ್ಬಲ್ಯದಿಂದ ಮನುಷ್ಯನು ಶೀಘ್ರಕೋಪಿಯಾಗುವನು. ಯಾರಾದರೂ ತನಗೆ ಒಪ್ಪದ ಮಾತನ್ನಾಡಿದಾಗ ಅಥವಾ ಒಪ್ಪದ ಕೆಲಸ ಮಾಡಿದಾಗ ಅವನು ಒಮ್ಮೆಲೇ ಸಿಟ್ಟಿಗೇಳುವನು. ಯಾವನಿಗೆ ಮನೋನಿಗ್ರಹವಿಲ್ಲವೋ ಅವನನ್ನು ಅವನ ಅಂತರಂಗವೇ ವೈರಿಯಾಗಿ ಕಾಡುವದು. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಆರು ವೈರಿಗಳು ಸದಾಕಾಲ ಹೃದಯದಲ್ಲಿ ವಾಸವಾಗಿರುವವು. ಮನೋಬಲವು ಕಡಿಮೆಯಾಗುವ ವೇಳೆಯನ್ನೇ ಅವು ಕಾಯುತ್ತ ಕುಳಿತಿರುವವು. ಅಂಥ ಸಮಯ ದೊರೆತ ಕೂಡಲೇ ಅವು ಮನುಷ್ಯನನ್ನು ಸಂಪೂರ್ಣವಾಗಿ ತಮ್ಮ ವಶದಲ್ಲಿ ತೆಗೆದುಕೊಂಡು ಅವನ ಶ್ರೇಯಸ್ಸಿನ ಮಾರ್ಗವನ್ನು ತಪ್ಪಿಸುವವು. ಹೀಗಾಗಿ ಮನುಷ್ಯನು ಅನೇಕ ವಿಧದ ಸಂಸಾರ ಬಾಧೆಗಳನ್ನು ತಡೆಯಲಾರದೆ ಮರಣವನ್ನು ಬಯಸುವನು. ಅವುಗಳಿಂದ ಪಾರುಗಾಣಲು ಮರಣದ ಹೊರತು ಮತ್ತಾವ ಮಾರ್ಗವೂ ಅವನಿಗೆ ತೋಚುವದಿಲ್ಲ.''

ಸಾಧುವು ಹೀಗೆ ಹೇಳಿದಾಗ ಆತನ ಶಿಷ್ಯರಲ್ಲೊಬ್ಬನು ಹೀಗೆ, ಪ್ರಶ್ನೆ ಮಾಡಿದನು:—

ಶಿಷ್ಯ—''ಗುರುಗಳೇ, ಸಂಸಾರವು ಇಷ್ಟು ದುಃಖಮಯವಾಗಿದ್ದರೆ ಸೃಷ್ಟಿಯ ಉದ್ದೇಶವೇನು? ಸಂಸಾರದಲ್ಲಿ ಸುಖವೆಂಬದು ಇಲ್ಲವೇ ಇಲ್ಲವೇನು? ಸಂಸಾರದ ಬಗ್ಗೆ ಇಷ್ಟು ನಿರಾಶಾವಾದವನ್ನು ತಾಳಿಕೊಂಡರೆ ಜೀವಿತದ ನಿಜವಾದ ಧ್ಯೇಯವಾದರೂ ಏನು?''

ಸಾಧು—"ಸರಿಯಾದ ಪ್ರಶ್ನೆಮಾಡಿದೆ. ಸಂಸಾರದಲ್ಲಿ ಸುಖಕ್ಕಿಂತ ದುಃಖವು ಹೆಚ್ಚಾಗಿರುವದು ನಿಜವು. ಸೃಷ್ಟಿಕರ್ತನು ಅನಂತನೂ, ಪರಿಪೂರ್ಣನೂ, ಶಾಶ್ವತನೂ, ಸಚ್ಚಿದಾನಂದನೂ ಇದ್ದಾನೆ. ಆತನು ಸೂರ್ಯನಂತೆ ತನ್ನ ಆತ್ಮದ ಕಿರಣಗಳನ್ನು ಹರಡುತ್ತಾನೆ. ಆ ಕಿರಣಗಳು ಜೀವಾತ್ಮರೂಪದಿಂದ ಕೆಲಕಾಲ ದೇಹರೂಪದಿಂದ ಭೂಮಿಯಲ್ಲಿ ನೆಲೆಗೊಳ್ಳುವವು. ಈ ಜೀವಾತ್ಮಗಳಿಗೆ ಕ್ರಿಯಾ ಸ್ವಾತಂತ್ರ್ಯವುಂಟು. ತಮ್ಮ ತಮ್ಮ ಕೃತಿಗಳಿಗನುಸಾರವಾಗಿ ಅವು ತಮ್ಮ ಭವಿಷ್ಯವನ್ನು ರಚಿಸಿಕೊಳ್ಳುವವು. ಯಾವ ಜೀವಿಗಳು ನಿಗ್ರಹವುಳ್ಳವುಗಳಾಗದೆ ಸ್ವೇಚ್ಛಾವೃತ್ತಿಯನ್ನು ಅನುಸರಿಸುವವೋ ಅವು ಸಂಸಾರದ ದುಃಖಗಳಿಗೀಡಾಗುವವು. ಯಾವ ಜೀವಾತ್ಮಗಳು ಸಾತ್ವಿಕ ಮಾರ್ಗವನ್ನನುಸರಿಸುವವೋ ಅವು ನಿಜವಾದ ಸುಖ ಅದೇಕೆ ಬ್ರಹ್ಮಾನಂದವನ್ನೇ ಅನುಭವಿಸುವವು. ಸಂಸಾರವು ಒಂದು ಮಹಾ ಸಾಗರದಂತಿರುವದು. ಮನುಷ್ಯನು ಆ ಸಾಗರವನ್ನು ದಾಟಿ ಮುಕ್ತನಾಗಲು ಸದ್ವರ್ತನೆಯೆಂಬ ನೌಕೆಯ ಮೂಲಕವಾಗಿ ವಿಪತ್ತುಗಳೆಂಬ ಬಂಡೆಗಲ್ಲುಗಳನ್ನು ತಪ್ಪಿಸಿಕೊಂಡು, ಕಾಮ, ಕ್ರೋಧಗಳೆಂಬ ತೆರೆಗಳನ್ನು ತಗ್ಗಿಸಿ; ರೋಗರುಜೆಗಳೆಂಬ ತಿಮಿಂಗಿಲಗಳನ್ನು ತುಳಿದುಹಾಕಿ; ಲೋಭ, ಮೋಹಗಳೆಂಬ ಬಿರುಗಾಳಿಗಳಿಗೆ ಎದೆಗೊಟ್ಟು; ವಿವೇಕವೆಂಬ ಹೋಕಾ ಯಂತ್ರವನ್ನನುಸರಿಸಿ, ಆತ್ಮಜ್ಯೋತಿಯ ನೆರವಿನಿಂದ ಸಂಸಾರ ಸಾಗರದಿಂದ ಪಾರುಗಾಣಬೇಕು.

ಪ್ರಪಂಚದಲ್ಲಿ ಅನೇಕ ಜೀವಜಂತುಗಳಿರುವವು. ಕೆಲವು ಸಾತ್ವಿಕ ಪ್ರಾಣಿಗಳೂ, ಕೆಲವು ತಾಮಸವೂ, ಕೆಲವು ರಾಜಸಗುಣಗಳುಳ್ಳವೂ ಇರುವವು. ಇವು ತಮ್ಮ ಪೂರ್ವಕರ್ಮಾನುಗುಣವಾಗಿ ಜನ್ಮ ತಾಳಿರುವವು. ಯಾವ ಪ್ರಾಣಿಗಳು ಸಾತ್ವಿಕವೃತ್ತಿಯನ್ನನುಸರಿಸುವವೋ ಅವು ಸಂಸಾರ ಜಾಲದಿಂದ ಮುಕ್ತವಾಗಿ ಪರಮಾತ್ಮನ ಪರಂಜ್ಯೋತಿಯಲ್ಲಿ ಅಡಗುವವು. ರಾಜಸ, ತಾಮಸಗುಣದ ಪ್ರಾಣಿಗಳು ಮತ್ತೆ ಮತ್ತೆ ಸಂಸಾರ ಚಕ್ರದಲ್ಲಿ ಹುಟ್ಟಿಬಂದು ಜನನ ಮರಣಗಳ ಪುನರಾವೃತ್ತಿಗೆ ಆಹುತಿಯಾಗುವವು. ದುಷ್ಟ ಜೀವಿಗಳು ತಮ್ಮ ದರ್ಪಬಲ

ಗಳಿಂದ ಇತರರಿಗೆ ಹಿಂಸೆಗೊಳಿಸಿ ತಮ್ಮ ಸ್ವಾರ್ಥ ಹಾಗು ಏಳಿಗೆಯನ್ನು ಸಾಧಿಸುವರು. ಬಹುಕಾಲ ಅಂಥವರ ಏಳಿಗೆಯು ನೆಲೆಸುವದು. ಆದರೆ ಅಂತ್ಯದಲ್ಲಿ ಅವರ ಅನ್ಯಾಯದ ಮತ್ತು ಅಸತ್ಯದ ಪರಿಣಾಮವಾಗಿ ಅವರು ಕೀಳು ಸ್ಥಿತಿಯನ್ನು ಹೊಂದಿ ಜನಸಮಾಜದಿಂದ ತಿರಸ್ಕಾರ ಹೊಂದಿ ದುಃಖ ಭಾಗಿಗಳಾಗುವರು. ಭೂಮಿಯೇ ಅವರಿಗೆ ನರಕ ವಾಗುವದು. ತಾವು ಮಾಡಿದ ದುಷ್ಟ ಕೃತಿಗಳಿಂದುಂಟಾದ ಪಶ್ಚಾತ್ತಾಪವು ಅವರ ಮನಸ್ಸಿನಲ್ಲಿ ಭೂತವಾಗಿ ಭ್ರಮೆಯನ್ನುಂಟು ಮಾಡುವದು—ಸತ್ಯವಂತರಿಗೆ ಎಡರುಗಳು ಬರುವದು ಬಹಳ. ಬಹುಕಾಲ ಅವರು ಅನೇಕ ಅಡಚಣೆಗಳನ್ನು ಅನುಭೋಗಿಸಬೇಕಾಗುವದು. ಎಷ್ಟು ವಿಪತ್ತುಗಳು ಬಂದರೂ ಅವರು ಸತ್ಯಮಾರ್ಗವನ್ನು ಬಿಡುವದಿಲ್ಲ. ಕೊನೆಯಲ್ಲಿ ಅವರಿಗೆ ಶ್ರೇಯಸ್ಸು ಖಂಡಿತವಾಗಿ ಸಿಗುವದು. ದೇವರು ಅವರ ಸತ್ವ ಪರೀಕ್ಷೆಗಾಗಿಯೇ ಅನೇಕ ತೊಂದರೆಗಳನ್ನು ಒಡ್ಡುತ್ತಾನೆ. ಅವರು ಅವೆಲ್ಲವುಗಳಿಗೆ ಎದೆಗೊಟ್ಟು ಮೋಹಿತರಾಗದೆ ಆತ್ಮಯಜ್ಞದ ಅಗ್ನಿಯಲ್ಲಿ ಧುಮುಕಿ ಶುದ್ಧರಾಗಿ ಹೊರಗೆ ನುಸುಳುತ್ತಾರೆ.

ಸೃಷ್ಟಿಯಲ್ಲಿ ಜೀವಿಗಳು ನಿರಂತರವಾಗಿ ಸುಖ ಮತ್ತು ಮೋಕ್ಷ ಪ್ರಾಪ್ತಿಗಾಗಿ ಹೋರಾಡುತ್ತಿರುವವು. ಆದರೆ ನಿಜವಾದ ಮಾರ್ಗವನ್ನು ಅರಿತುಕೊಳ್ಳದೆ ಕ್ಷಣಕಾಲದ ಇಂದ್ರಿಯ ಸುಖಕ್ಕೆ ಮೋಹ ಹೋಗಿ ಅಪಾರವಾದ ದುಃಖಕ್ಕೀಡಾಗುವವು. ಸಂಸಾರದಲ್ಲಿಯೇ ಸ್ವರ್ಗವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿದೆ. ಯಾವನು ತನ್ನಂತೆ ಪರರನ್ನು ಬಗೆದು ಅವರ ಹಿತಚಿಂತನೆ ಮಾಡುವನೋ, ಯಾವನು ಪರಹಿಂಸೆ ಮಾಡದೆ ಪರರನ್ನು ಪ್ರೇಮದಿಂದ ಕಾಣುವನೋ ಅವನು ನಿಜವಾಗಿ ಎಲ್ಲರ ಪ್ರೇಮಾದರಗಳಿಗೆ ಪಾತ್ರನಾಗುವನು. ಈ ಸ್ಥಿತಿಯನ್ನು ಸಂಪಾದಿಸಲು ಮನುಷ್ಯನು ಮೊದಲು ಸ್ವಾರ್ಥತ್ಯಾಗಮಾಡಬೇಕಾಗುವದು, ಕೆಲವು ಕಷ್ಟಗಳನ್ನು ಸಹಿಸಬೇಕಾಗುವದು, ತ್ಯಾಗಬುದ್ಧಿಯಿಂದ ತನ್ನ ಸೊತ್ತನ್ನು ಪರರಹಿತಕ್ಕೆ ಸಲ್ಲಿಸಬೇಕಾಗುವದು. ಹೀಗೆ ಮಾಡಿದ ನಂತರ ಅವನ ಆತ್ಮಪ್ರಕಾಶದ ವರ್ಚಸ್ಸು ಎಲ್ಲರ ಮೇಲೆ ಸಹಜವಾಗಿ ಬೀಳುವದು. ಎಲ್ಲರೂ ಅವನನ್ನು ಆದರದಿಂದ ಮನ್ನಿಸುವರು. ಅವನು ಬಯ

ಸದೆ ಇದ್ದ ವಸ್ತುಗಳು ಸಹ ಅವನ ಬಾಗಿಲಿನಲ್ಲಿ ಬಂದು ಬೀಳುವವು. ಈ ಪರಿಸ್ಥಿತಿಯುಂಟಾದಾಗ ಮನುಷ್ಯನಿಗೆ ಭೂಮಿಯೇ ಸ್ವರ್ಗವಾಗಿ ಪರಿಣಮಿಸುವದು. ತ್ಯಾಗ ಬುದ್ಧಿಯೇ ನಿಜವಾದ ಸುಖದ ತಳಹದಿಯು.

ಸಂಸಾರಿಯಾದವನು ವಿಷಯಗಳ ವ್ಯಾಮೋಹದಿಂದ ನಿಸ್ಸಂಗಿಯಾಗಿರಬೇಕು. ಸತ್ಯ, ಪ್ರಾಮಾಣಿಕತನಗಳಿಂದ ದ್ರವ್ಯಾರ್ಜನೆ ಮಾಡಬೇಕು. ಆದರೆ ಹಣದ ಲೋಭಿಯಾಗಿರಬಾರದು. ಲೋಭಿಗೆ ಕೋಟಿಗಟ್ಟಲೆ ದ್ರವ್ಯವಿದ್ದರೂ ಮತ್ತೂ ಗಳಿಸುವ ಹವ್ಯಾಸವಿರುವದು. ಅದರಿಂದ ಅವನಿಗೆ ತೃಪ್ತಿಯೇ ಇರದು. ತೃಪ್ತಿ, ಶಾಂತಿಗಳು ನೆಲಸಬೇಕಾದರೆ ಆಶೆ ಅಳಿಯಬೇಕು, ಲೋಭವನ್ನು ಲಯಗೊಳಿಸಬೇಕು. ಕುಂಬಾರ ಹುಳವು ಕೆಸರಿನಲ್ಲಿದ್ದರೂ ಮೈಗೆ ಕೆಸರು ಹಚ್ಚಿಕೊಳ್ಳದಿರುವಂತೆ ಇರಬೇಕು. ಕಮಲವು ನೀರಿನಲ್ಲಿ ಬೆಳೆದರೂ ಕಮಲದ ಎಲೆಯು ನೀರಿಗೆ ಹೊದ್ದದಂತೆ ಮೇಲ್ಭಾಗಕ್ಕೆ ಚಿಮ್ಮಿಕೊಂಡಿರುವದು. ಹಾಗೆಯೇ ಮನುಷ್ಯನು ಹೊನ್ನು, ಹೆಣ್ಣು, ಮಣ್ಣುಗಳ ಮೋಹಕ್ಕೆ ಮರುಳಾಗದೆ ಅಲಿಪ್ತನಾಗಿರಬೇಕು. ಸಂಸಾರದಲ್ಲಿ ಒದಗುವ ಸುಖ, ದುಃಖಗಳನ್ನು ಹಚ್ಚಿಕೊಳ್ಳದೆ ಸಮಬುದ್ಧಿಯಿಂದಿರಬೇಕು. ಕಾಯವಿರುವವರೆಗೆ ತನ್ನ ಕಾರ್ಯಗಳನ್ನು ಕರ್ತವ್ಯವೆಂದು ಮಾಡುತ್ತ ಹೋಗಬೇಕು. ಅವುಗಳಿಂದ ಫಲವನ್ನು ಹೊಂದುವ ಆಶೆಯನ್ನಿಟ್ಟುಕೊಳ್ಳಬಾರದು. ಯಾಕೆಂದರೆ ಫಲವು ದೊರೆಯದಿದ್ದರೆ ಅದು ದುಃಖಕ್ಕೆ ಕಾರಣವಾಗುವುದು. ಪ್ರತಿಫಲದಲ್ಲಿ ಆಸಕ್ತಿಯಿಲ್ಲದಾಗ ಪರಿಣಾಮದ ಫಲವು ಒಳಿತಾಗಲಿ ಇಲ್ಲವೆ ಕೆಡುಕಾಗಲಿ ಆದರೂ ಸಹ ಅವನಿಗೆ ಸುಖ, ದುಖಃಗಳಿಂದ ಯಾವ ಮನೋವಿಕಾರವೂ ಘಟಿಸುವದಿಲ್ಲ ಅವನ ಮನಸ್ಸು ಯಾವಾಗಲೂ ತೆರೆಗಳಿಲ್ಲದ ಶಾಂತವಾದ ಸಮುದ್ರದಂತೆ ಸಮಚಿತ್ತವುಳ್ಳದ್ದಾಗಿರುವದು. ಬ್ರಹ್ಮಚಿಂತನೆಯಲ್ಲಿಯೇ ಅವನ ಆನಂದವು ನೆಲೆಸಿರುವದು. ಪ್ರಪಂಚದಲ್ಲಿದ್ದರೂ ಅವನು ಪಾರಮಾರ್ಥಿಯಾಗಿರುವನು. ಸಂಸಾರಿಯಾಗಿದ್ದರೂ ಸಂಸಾರಕ್ಕೆ ಹೊದ್ದದಂತಿರುವನು. ಆಶೆಗಳನ್ನು ತೊರೆಯುವದೇ ನಿಜ ಸುಖ, ಶಾಂತಿಗಳಿಗೆ ಮೂಲ ಹೇತುವು. ಆಶೆಗಳೇ ಸಂಸಾರ ಪಾಶಕ್ಕೆ ಕಾರಣವು.

ಮೋಕ್ಷಾಪೇಕ್ಷಿಗಳಾದ ಜನರೇ, ಈ ವರೆಗೆ ಹೇಳಿದ ಮಾತುಗಳು ಬಾಲಕರಿಗೂ, ತರುಣರಿಗೂ, ಸ್ತ್ರೀಯರಿಗೂ, ವೃದ್ಧರಿಗೂ ಅನ್ವಯಿಸುವವು. ಜೀವಿಗಳು ಜಗತ್ತಿನಲ್ಲಿ ನಿಷ್ಕಾರಣವಾಗಿ ಅಥವಾ ಸುಖದುಃಖಗಳನ್ನು ಅನುಭವಿಸುವದಕ್ಕಾಗಿ ಬಂದವರಲ್ಲ. ಜೀವಿತದಲ್ಲಿ ಒಂದು ವಿಶಿಷ್ಟ ಧ್ಯೇಯವುಂಟು. ಜೀವಾತ್ಮವು ಪರಮಾತ್ಮನ ಪರಂಜ್ಯೋತಿಯ ಕಿರಣವಾಗಿದೆಯೆಂದು ಈ ಮೊದಲು ಹೇಳಿದ್ದಾಗಿದೆ ಆ ಕಿರಣವು ಭೂಮಿಯಲ್ಲಿ ದೇಹಧಾರಿಯಾಗಿ ತನ್ನ ಪ್ರಕಾಶವನ್ನು ಬೆಳಗಿ ಅನಂತ ಜೀವಿಗಳೊಡನೆ ಸಹಕಾರ ಪ್ರೇಮಗಳಿಂದ ವರ್ತಿಸಿ ತನ್ನ ಜೀವಿತವನ್ನು ಸಫಲಗೊಳಿಸಿ ಕೊನೆಯಲ್ಲಿ ಕಾಯವನ್ನು ತ್ಯಜಿಸಿ ಪರಮಾತ್ಮನಲ್ಲಿ ಒಂದುಗೂಡುವ ಉದ್ದೇಶವುಳ್ಳದ್ದು. ಮನುಷ್ಯನು ಮಾಯೆಯ ಮುಸುಕಿನಿಂದ ಮುಚ್ಚಲ್ಪಟ್ಟು ದೇಹವು ಶಾಶ್ವತವೆಂದು ನೆಚ್ಚಿ, ಇಂದ್ರಿಯ ವಿಕಾರಗಳಿಗೆ ವಶವಾಗಿ, ಕ್ಷಣಿಕ ಸುಖಭೋಗಿಸಿ, ಆ ಸುಖಭೋಗದ ಪರಿಣಾಮವಾಗಿ ದೀರ್ಘಕಾಲ ದುಃಖವನ್ನನುಭವಿಸಬೇಕಾಗುವದು. ಇದು ವ್ಯವಹಾರದಲ್ಲಿ ನಾವು ಅನುಭವದಿಂದ ಪ್ರತ್ಯಕ್ಷವಾಗಿ ಕಾಣುತ್ತೇವೆ. ಆದುದರಿಂದ ನೀವು ಶಾಶ್ವತವಾದ ಸುಖದ ಕಡೆಗೆ ಲಕ್ಷ್ಯವಿಟ್ಟು ಸತ್ಯ ಮತ್ತು ಶುದ್ಧವಾದ ಜೀವನವೃತ್ತಿಯಿಂದ ಪರಮಾತ್ಮನ ಪರಂಜ್ಯೋತಿಯಲ್ಲಿ ಬೆರೆಯುವ ಮಾರ್ಗವನ್ನು ಹಿಡಿಯಬೇಕೆಂಬುದು ನನ್ನ ಕೊನೆಯ ಮಾತಾಗಿರುವದು."

## ಪ್ರಕರಣ ೯

# ಶಂಕರನ ವೃತ್ತಾಂತ

ಈ ಮೊದಲು ೨ನೆಯ ಪ್ರಕರಣದಲ್ಲಿ ಹಳ್ಳಿಯ ಹುಡುಗನಾದ ಶಂಕರನ ವೃತ್ತಾಂತವನ್ನು ಹೇಳಲಾಗಿದೆ. ಆತನನ್ನು ಸರಕಾರವು ಐ. ಸಿ. ಎಸ್. ಪರೀಕ್ಷೆಗಾಗಿ ವಿಲಾಯತಿಗೆ ಕಳುಹಿದ್ದನ್ನು ಸಹ

ವಿವರಿಸಲಾಗಿದೆ. ಆತನು ಲಂಡನ್ ಪಟ್ಟಣದಲ್ಲಿ ನೆಲಸಿ ಐ. ಸಿ. ಎಸ್. ಪರೀಕ್ಷೆಯ ಅಭ್ಯಾಸವನ್ನು ಮಾಡಿದನು. ಅವನು ಜನ್ಮದಿಂದ ಜಾಣನಾದುದರಿಂದ ಆ ಪರೀಕ್ಷೆಯಲ್ಲಿ ಸಹ ೧ನೆಯ ತರಗತಿಯಲ್ಲಿ ತೇರ್ಗಡೆಹೊಂದಿದನು. ಅದೇ ಕಾಲಕ್ಕೆ ಅವನು ಬ್ಯಾರಿಸ್ಟರ ಪರೀಕ್ಷೆಗೆ ಅಭ್ಯಾಸಮಾಡಿ ಅದರಲ್ಲಿಯೂ ಅವನು ಶ್ರೇಷ್ಠತರಗತಿಯಲ್ಲಿ ಉತ್ತೀರ್ಣನಾದನು. ಇಂಗ್ಲಿಷ ಜನರು ಸಹ ಅವನ ಬುದ್ಧಿಗೆ ಬೆರಗಾಗಿ ಲಿಬರಲ್ ಸಂಘವು ಅವನಿಗೆ ಒಂದು ಸಂತೋಷಕೂಟವನ್ನೇರ್ಪಡಿಸಿ ಅವನ ಪ್ರಶಂಸೆಮಾಡಿತು. ಲಂಡನಿನಲ್ಲಿದ್ದ ವಿದ್ಯಾರ್ಥಿಗಳ ಸಂಘವು ಅವನ ಸಲುವಾಗಿ ಆದರದ ಕೂಟವನ್ನು ನೆರವೇರಿಸಿ ಅವನಿಗೆ ಒಂದು ಬಂಗಾರದ ಪದಕವನ್ನು ಅರ್ಪಿಸಿತು. ಆ ಕೂಟಕ್ಕೆ ಆಗಿನ ಇಂಡಿಯಾದ ಸೆಕ್ರೆಟರಿಯು ಅಧ್ಯಕ್ಷನಾಗಿದ್ದನು. ಆತನು ಅಧ್ಯಕ್ಷಸ್ಥಾನದಿಂದ ಮಾತನಾಡುವಾಗ ಹೇಳಿದುದೇನೆಂದರೆ;—"ಒಬ್ಬ ಹಳ್ಳಿಯ ಹುಡುಗನು ಪಟ್ಟಣಕ್ಕೆ ಬಂದು ವಿದ್ಯೆ ಸಂಪಾದಿಸಿ ನಂತರ ವಿದೇಶಕ್ಕೆ ತೆರಳಿ ಉನ್ನತಸ್ಥಾನಕ್ಕೆ ಪಾತ್ರವಾದ ವಿದ್ಯೆ ಪಡೆಯುವದೆಂದರೆ ಸಾಮಾನ್ಯವಲ್ಲ. ಆತನ ಪೂರ್ವ ಸುಕೃತವೇ ಅವನಿಗೆ ನೆರವಾಗಿ ಆತನು ಈಗ ಶ್ರೇಷ್ಠಸ್ಥಾನಕ್ಕೆ ಬರುವಂತೆ ಕಾರಣವಾಗಿದೆ. ಯಾಕೆಂದರೆ ಹಳ್ಳಿಯಲ್ಲಿ ವಿದ್ಯೆಕಲಿತು ಉನ್ನತಸ್ಥಾನಕ್ಕೆ ಬರಬೇಕೆಂದು ಅನೇಕ ವಿದ್ಯಾರ್ಥಿಗಳು ಬಯಸಿದರೂ ಅವರೆಲ್ಲರಿಗೆ ಹಣಕಾಸಿನ ಸಹಾಯವು ದೊರೆಯದೆ ದರಿದ್ರರಾಗಿ ಉಳಿಯುವರು. ಮನುಷ್ಯನ ಪ್ರಗತಿ, ಪ್ರಕಾಶಗಳು ಬೆಳಗಬೇಕಾದರೆ ಅನುಕೂಲ ಪರಿಸ್ಥಿತಿಗಳು ಬೇಕು. ಈ ದಿನ ನಮ್ಮೆಲ್ಲರ ಅಭಿನಂದನೆಗೆ ಕಾರಣನಾದ ತರುಣನು ಪೂರ್ವದ ಸುಕೃತವುಳ್ಳವನು. ಸುಕೃತವಿಲ್ಲದೆ ಸುದೈವವುಂಟಾಗಲಾರದು. ಆದುದರಿಂದ ಸತ್ಕೃತಿ, ಸ್ವಪ್ರಯತ್ನ, ಸದುದ್ದೇಶಗಳು ಮುಂದಿನ ಜೀವಿತದ ಸಂಸ್ಕಾರ ಹಾಗು ಸಾಫಲ್ಯಕ್ಕೆ ತಳಹದಿಯಾಗುವವು. ಈ ತರುಣನಿಗೆ ದೀರ್ಘಾಯುಷ್ಯ ಆರೋಗ್ಯ, ಅಭಿವೃದ್ಧಿಗಳುಂಟಾಗಲೆಂದು ನಾನು ಬಯಸುತ್ತೇನೆ."

ಹೀಗೆ ಅಧ್ಯಕ್ಷರ ಭಾಷಣವಾದನಂತರ ಶಂಕರನು ಸಭಿಕರ ಆಭಾರ ಮನ್ನಿಸುವದಕ್ಕಾಗಿ ಎದ್ದುನಿಂತನು. ಅವನು ಹೇಳಿದ್ದೇನೆಂದರೆ, —

"ಮಾನ್ಯ ಅಧ್ಯಕ್ಷರೇ, ಸಹೋದರಿ, ಸಹೋದರರೇ, ಈ ದಿನ ನೀವು ನಾನು ಪಡೆದ ಅಲ್ಪ ಯಶಸ್ಸಿಗಾಗಿ ನನ್ನ ಅಭಿನಂದನೆಗಾಗಿ ಈ ಸಮಾರಂಭವನ್ನು ಏರ್ಪಡಿಸಿದ್ದಕ್ಕಾಗಿ ನಾನು ನಿಮಗೆ ತುಂಬಾ ಆಭಾರಿಯಾಗಿದ್ದೇನೆ. ವಿದ್ಯೆ ಸಂಪಾದಿಸುವದು ಮನುಷ್ಯನ ಕೇವಲ ಸ್ವಾರ್ಥ ಸಾಧನೆಗಾಗಿ ಇರದೆ ಅವನ್ನು ಪರರ ಹಿತಕ್ಕಾಗಿ ಉಪಯೋಗಿಸುವದು ಮುಖ್ಯ ಧೇಯವಾಗಿದೆ. ವಿದ್ಯೆಯು ವಿತಂಡವಾದ ಮಾಡುವದಕ್ಕೆ ಸಾಧನವಾಗಿರಬಾರದು. ಶಾಸ್ತ್ರಾವಲೋಕನದಿಂದ ತಾನು ಆನಂದ ಹೊಂದುವದಲ್ಲದೆ ಪರರಿಗೂ ಆನಂದವನ್ನುಂಟುಮಾಡಬೇಕು. ಎರಡನೆಯದಾಗಿ ವಿದ್ಯೆಯಿಲ್ಲದವರಲ್ಲಿ ಓದುಬರಹಗಳ ಜ್ಞಾನವನ್ನುಂಟುಮಾಡಿ ಅವರ ಜೀವನದ ಮಟ್ಟವು ಉನ್ನತವಾಗುವಂತೆ ಮಾಡಬೇಕು. ಮನುಷ್ಯನು ಸಮಾಜದ ಒಂದು ಅಂಗವಾಗಿರುವದರಿಂದ ಸಮಾಜದಲ್ಲಿಯ ಜನರು ಬುದ್ಧಿವಂತರೂ, ಸದ್ಗುಣಿಗಳೂ, ಆರೋಗ್ಯವಂತರೂ ಆಗಿದ್ದರೆ ಪ್ರತಿಯೊಬ್ಬ ವ್ಯಕ್ತಿಗೆ ಆ ಸೌಲಭ್ಯಗಳಿಂದ ಹಿತ ದೊರಕುವದು. ಅಜೀರ್ಣದಿಂದ ಹೊಟ್ಟೆಶೂಲೆಯುಂಟಾದಾಗ ದೇಹದಲ್ಲಿ ಜಡಭಾವವೂ, ಮನಸ್ಸಿನಲ್ಲಿ ಮಂದಭಾವವೂ ಉಂಟಾಗುವಂತೆ ಸಮಾಜದಲ್ಲಿಯ ಜನರು ಅಜ್ಞರೂ, ದುಷ್ಟರೂ, ರೋಗಿಗಳೂ ಆಗಿರುವಲ್ಲಿ ಆ ಪಿಡುಗುಗಳು ತಜ್ಞರಿಗೂ ಸಹ ತಗಲುವವು. ಆದುದರಿಂದ ಮನುಷ್ಯನು ಕೇವಲ ತನ್ನ ಏಳಿಗೆಯನ್ನು ಮಾಡಿಕೊಳ್ಳುವದರ ಕಡೆಗೆ ಮನಸ್ಸು ಹಾಕದೆ ಪರರನ್ನು ಸಹ ಸುಧಾರಿಸುವದರಲ್ಲಿ ಅವನ ಹಿತವು ಅಡಕವಾಗಿದೆ. ಮೂರನೆಯದಾಗಿ ವಿದ್ಯಾಸಂಪಾದನೆಯಿಂದ ವಿನಯ, ಪ್ರೇಮಗುಣಗಳು ನೆಲೆಗೊಳ್ಳಬೇಕು. ವಿನಯದಿಂದ ಅಹಂಕಾರ, ದರ್ಪ, ಕೋಪ, ಅಸೂಯೆ ಮುಂತಾದ ದುರ್ಗುಣಗಳು ಅಳಿದು ಹೋಗುವವು. ವಿನಯವು ಮನುಷ್ಯನಿಗೆ ಒಂದು ಆಭರಣದಂತೆ ಶೋಭೆಯನ್ನುಂಟು ಮಾಡುವದು. ಪರರ ಮೇಲೆ ಪ್ರೇಮ ತೋರಿಸುವದರಿಂದ ವೈರಿಗಳೇ ಇಲ್ಲದಂತಾಗುವದು. ಎಲ್ಲೆಡೆಯಲ್ಲಿಯೂ ಗೌರವ, ಆದರಗಳೇ ದೊರೆಯುವವು.

ಮನುಷ್ಯನ ಅಂತರಂಗದಲ್ಲಿರುವ ಕಾಮ, ಕ್ರೋಧ, ಲೋಭ,

ಮೋಹ, ಮದ, ಮತ್ಸರಗಳೆಂಬ ವೈರಿಗಳನ್ನು ಸದೆಬಡೆದರೆ ಬಹಿರಂಗದ ವೈರಿಗಳು ಯಾರೂ ಉಂಟಾಗರು. ಮನುಷ್ಯನ ಜೀವಿತದಲ್ಲಿ ಒಂದು ವಿಶಿಷ್ಟ ಧ್ಯೇಯವಿರುವದು. ಎಲ್ಲ ಜೀವಾತ್ಮಗಳು ಪರಮಾತ್ಮನ ಕಿರಣಗಳು. ಭೂಲೋಕದಲ್ಲಿ ಜೀವಾತ್ಮಗಳು ಉಳಿದ ಯಾವತ್ತು ಜೀವಿಗಳನ್ನು ತಮ್ಮಂತೆ ಭಾವಿಸಿ ದೀನಸ್ಥಿತಿಯಲ್ಲಿರುವ ಜೀವಿಗಳ ಉದ್ಧಾರಕ್ಕಾಗಿ ಅವಶ್ಯವಾದ ಸೇವೆಯನ್ನು ಸಲ್ಲಿಸುವದು ಅವುಗಳ ಕರ್ತವ್ಯ ಕರ್ಮವು. ಇದು ದೇವರ ಸಂಕೇತವು ಮತ್ತು ಜೀವಾತ್ಮದ ಧ್ಯೇಯವು. ನಾನು ಈ ಧ್ಯೇಯವನ್ನು ಯಾವಾಗಲೂ ಲಕ್ಷದಲ್ಲಿಟ್ಟುಕೊಂಡು ವರ್ತಿಸುವೆನು. ನೀವು ಈ ದಿನ ನನಗೆ ತೋರಿಸಿದ ಗೌರವದ ಕಾರಣವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ನನ್ನ ಆತ್ಮಕ್ಕೆ ನಿಮ್ಮ ಆತ್ಮಗಳು ಆನಂದ ವ್ಯಕ್ತಮಾಡಿದಂತಾಗಿದೆ. ಇದರ ಗುಟ್ಟೇನೆಂದರೆ ಎಲ್ಲ ಆತ್ಮಗಳ ಉಗಮ ಸ್ಥಾನವು ಒಂದೇ ಆಗಿರುವದೆಂಬುದು. ಇದು ನಿಜವಿರದಿದ್ದರೆ ಏನೂ ಸಂಬಂಧವಿಲ್ಲದವನಿಗೆ ಹೆರವರು ಸಹಾನುಭೂತಿ, ಪ್ರೇಮಗಳನ್ನು ತೋರಿಸುವದು ಅಸಂಭವವು. ಜೀವಾತ್ಮವು ನಿರಾಕಾರವಿದ್ದು ಪ್ರಪಂಚದಲ್ಲಿ ಕರ್ತವ್ಯ ಕರ್ಮಗಳನ್ನು ನೆರವೇರಿಸುವದಕ್ಕಾಗಿ ದೇಹದ ಹೊದಿಕೆಯನ್ನು ಧರಿಸುವದು. ಜೀವವು ಒಳಗಿನ ತಿರುಳಾದ ಕೊಬ್ಬರಿಯಂತೆ ಇದ್ದು ದೇಹವು ಹೊರಗಿನ ಚಿಪ್ಪಿನಂತೆ ಇದೆ. ದೇಹವು ಸಿಂಪಿನಂತೆ, ಜೀವವು ಅದರೊಳಗಿನ ಮುತ್ತಿನಂತಿರುವದು. ದೇಹವು ಸಿಪ್ಪೆಯಂತೆ ಚೇತನವಿಲ್ಲದ್ದು, ಜೀವವು ಬೀಜದಂತೆ ಚೇತನಾಮಯವಾದದ್ದು. ದೇಹಸುಖವು ಮಿಥ್ಯವಾದದ್ದು ಆತ್ಮಸುಖವು ಸತ್ಯವಾದದ್ದು ಮತ್ತು ನಿತ್ಯವಾದದ್ದು. ಮಹಾಶಯರೇ, ನಾನು ಹೆಚ್ಚಿಗೆ ಹೇಳಲು ಬಯಸುವದಿಲ್ಲ. ಪ್ರೇಮವೆಂಬ ಸೂತ್ರವೇ ಜಗತ್ತಿನಲ್ಲಿಯ ಎಲ್ಲ ಪ್ರಾಣಿಗಳನ್ನು ಒಂದು ಕಟ್ಟಿನಲ್ಲಿ ಹೆಣೆದಿರುವದು. ಪ್ರೇಮ ಪ್ರಕಟನೆಯಿಂದಲೇ ಆತ್ಮ ವಿಕಾಸ, ಆತ್ಮದ ಏಳಿಗೆ ಹಾಗೂ ಆತ್ಮದ ಸ್ವಾತಂತ್ರ್ಯ. ನಾನು ಮತ್ತೊಮ್ಮೆ ತಮ್ಮ ಆಭಾರವನ್ನು ಮನ್ನಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.”

ಈ ವಿಧವಾದ ಉಪನ್ಯಾಸವನ್ನು ಕೇಳಿ ಸಭಿಕರು ಹರ್ಷಿತರಾಗಿ ಚಪ್ಪಾಳೆ ಬಾರಿಸಿ ತಮ್ಮ ಆನಂದವನ್ನು ವ್ಯಕ್ತಗೊಳಿಸಿದರು. ಆ ಮೇಲೆ

ಸಭಾಧ್ಯಕ್ಷರು ಆ ದಿನದ ಅತಿಥಿಗೆ ಮತ್ತೆ ಸುಭಾಶಯಗಳನ್ನು ಬಯಸುವ ಕೆಲವು ಮಾತುಗಳನ್ನು ಹೇಳಿ ಸಭೆಯನ್ನು ಮುಕ್ತಾಯ ಮಾಡಿದರು. ಶಂಕರನು ತನ್ನ ವಸತಿ ಗೃಹಕ್ಕೆ ಹೊರಟನು. ಅವನು ತಾನು ಪರೀಕ್ಷೆಯಲ್ಲಿ ತೇರ್ಗಡೆಯಾದ ವರ್ತಮಾನವನ್ನು ಈ ಮೊದಲು ಮುಂಬಯಿ ಸರಕಾರದ ಚೀಫ ಸೆಕ್ರೆಟರಿಯವರಿಗೂ ತನ್ನ ಪೋಷಕನಾದ ಸದಾಶಿವರಾಯನಿಗೂ ಕೇಬಲ್ಲಿನ ಮೂಲಕ (ಸಮುದ್ರದೊಳಗೆ ಹಾಕಿದ ತಂತೀವಾರ್ತೆ) ತಿಳಿಸಿದ್ದನು. ಅದೇ ದಿನ ಅವನಿಗೆ ಮುಂಬಯಿ ಸರಕಾರವು ಯುರೋಪ ಖಂಡದ ಮುಖ್ಯ ಪಟ್ಟಣಗಳಲ್ಲಿ ಸಂಚರಿಸಿ ಅಲ್ಲಿಯ ರಾಜ್ಯಪದ್ಧತಿ, ಆರ್ಥಿಕ ಸ್ಥಿತಿ, ಕೈಗಾರಿಕೆಗಳ ಕೌಶಲ್ಯ, ಸಹಕಾರಪದ್ಧತಿ ಮುಂತಾದುವುಗಳನ್ನು ನಿರೀಕ್ಷಿಸಿಕೊಂಡು ಬರಲು ತಂತಿಯ ಮೂಲಕ ತಿಳಿಸಿತ್ತು ಮತ್ತು ಅವನ ಪ್ರವಾಸದ ಖರ್ಚಿಗಾಗಿ ೫೦೦ ಪೌಂಡುಗಳನ್ನು ಕೊಡುವ ಬಗ್ಗೆ ಇಂಡಿಯಾ ಸೆಕ್ರೆಟರಿಗೆ ಸಹ ತಂತೀವಾರ್ತೆಯನ್ನು ಕಳುಹಿತ್ತು. ಶಂಕರನು ವಿಲಾಯತಿಯಲ್ಲಿರುವಾಗ ಇಂಗ್ಲಿಷ್ ಜನರಲ್ಲಿರುವ ಶಿಸ್ತು, ವೇಳೆಯ ಮಹತ್ವ, ಉದ್ಯೋಗ ತತ್ಪರತೆ, ನ್ಯಾಯ ಮತ್ತು ಸ್ವಾತಂತ್ರ್ಯ ಪ್ರಿಯತೆ, ದೇಶಭಕ್ತಿ, ಒಕ್ಕಟ್ಟು, ಪ್ರಾಮಾಣಿಕತನ, ರಾಜ್ಯಾಡಳಿತೆಯ ಮುತ್ಸದ್ದಿತನದ ಗುಣಗಳಿಗೆ ಮೆಚ್ಚಿ ಅವುಗಳನ್ನು ಅನುಕರಣೆ ಮಾಡಿದನು.

ಶಂಕರನು ಇಂಗ್ಲಂಡದಲ್ಲಿಯ ಬರ್ಮಿಂಗ್ಹಾಮ್ ಪಟ್ಟಣದ ಕಬ್ಬಿಣದ ಕಾರಖಾನೆಗಳನ್ನೂ, ಮಾಂಚೆಸ್ಟರದ ಬಟ್ಟೆಯ ಗಿರಣಿಗಳನ್ನೂ, ಷೆಫೀಲ್ಡದಲ್ಲಿಯ ಆಯುಧಗಳ ಕಾರ್ಯಾಲಯವನ್ನೂ, ಲಂಡನ್, ಲಿವ್ಹರಪೂಲುಗಳಲ್ಲಿಯ ಹಡಗು ಕಟ್ಟುವ ಕಾರ್ಯಾಲಯಗಳನ್ನೂ ಪರಿಶೀಲಿಸಿ ಯಾಂತ್ರಿಕ ಉದ್ಯೋಗದಿಂದ ಲಭಿಸುವ ಸಂಪತ್ತು ಬೇಸಾಯಕ್ಕಿಂತ ಮಿಗಿಲಾದುದೆಂದು ಮನಗಂಡನು. ಲಂಡನ್ ಪಟ್ಟಣವಾದರೋ ಜಗತ್ತಿನ ಎಲ್ಲ ಪ್ರತಿನಿಧಿಗಳ ಮತ್ತು ಉದ್ದಿಮೆಗಳ ಕೇಂದ್ರವಾಗಿದ್ದು ಅದು ೧೫ ಮೈಲು ಉದ್ದಳತೆ ೧೦ ಮೈಲು ಅಗಲವಾಗಿದ್ದು ೭೫ ಲಕ್ಷ ಜನಸಂಖ್ಯೆಯುಳ್ಳದ್ದು. ಅಲ್ಲಿರುವ ವಿಶ್ವವಿದ್ಯಾಲಯಗಳ, ಪುಸ್ತಕಾಲಯಗಳ, ಪಂಡಿತರ, ಶಿಲ್ಪಿಗಳ, ರಾಜಕಾರಣಿಗಳ ಸಂಖ್ಯೆಯು ಮತ್ತೆ

ಲ್ಲಿಯೂ ಇರುವದಿಲ್ಲ. ಅದೊಂದೇ ಪಟ್ಟಣದಲ್ಲಿ ೨೮ ಸಾವಿರ ಬೀದಿಗಳುಂಟು. ಆರುನೂರು ರೇಲುವೆ ನಿಲ್ದಾಣಗಳುಂಟು ಅಂಚೆ ಕಚೇರಿಗಳು ಪ್ರತಿದಿನ ೨೦ ಲಕ್ಷ ಪತ್ರಗಳನ್ನೂ, ೧ ಲಕ್ಷ ವರ್ತಮಾನ ಪತ್ರಗಳನ್ನೂ ಜನರಲ್ಲಿ ಹಂಚುವವು. ಲಂಡನ್ ಬಂದರದಲ್ಲಿ ಪ್ರತಿದಿನ ೩೦೦ ಕೋಟಿ ಬೆಲೆಯ ಸರಕು ಪರದೇಶದಿಂದ ಬರುವದು ಮತ್ತು ೨೦೦ ಕೋಟಿ ಬೆಲೆಯ ಕೈಗಾರಿಕೆ ಸರಕು ಪರದೇಶಕ್ಕೆ ಹೋಗುವದು. ೧೦೦ಕ್ಕಿಂತ ಹೆಚ್ಚು ಸಂಖ್ಯೆಯ ಉಚಿತವಾಗಿ ಓದಲು ತೆರೆದಿಟ್ಟ ಪುಸ್ತಕಾಲಯುಗಳುಂಟು. ಬ್ರಿಟಿಷ್ ವಸ್ತುಸಂಗ್ರಹಾಲಯುದಲ್ಲಿ ೪೦ ಲಕ್ಷಕ್ಕಿಂತ ಹೆಚ್ಚು ಗ್ರಂಥಗಳುಂಟು. ಲಂಡನ್ ಪಟ್ಟಣವನ್ನು ಸಂದರ್ಶಿಸಿದವನು ಉದ್ಯೋಗಿಯೂ ತೀಕ್ಷ್ಣ ಬುದ್ಧಿಯವನೂ ಆಗದೆ ಇರನು.

ಶಂಕರನು ಮುಂದೆ ಫ್ರಾನ್ಸದ ರಾಜಧಾನಿಯಾದ ಪ್ಯಾರಿಸ್ ಪಟ್ಟಣಕ್ಕೆ ಪ್ರಯಾಣ ಬೆಳೆಸಿದನು. ಇದು ಜಗತ್ತಿನಲ್ಲಿ ಅತಿ ಸುಂದರವಾದ ಪಟ್ಟಣವು. ಅಲ್ಲಿಯ ಕಟ್ಟಡಗಳ, ಬೀದಿಗಳ, ಉಪವನಗಳ ಸುವ್ಯವಸ್ಥೆ ಹಾಗು ಅಚ್ಚುಕಟ್ಟು ಮತ್ತೆಲ್ಲಿಯೂ ಇರುವದಿಲ್ಲ. ಫ್ರೆಂಚ ಜನರು ವಿಲಾಸಿಗಳೂ ಲಲಿತ ಕಲೆಯಲ್ಲಿ ಪ್ರವೀಣರೂ, ಸಂಸ್ಕೃತಿ, ಶಿಷ್ಟಾಚಾರಸಂಪನ್ನರೂ ಇರುವರು. ಆದರೆ ಶ್ರಮಸಹಿಷ್ಣುತೆಯಿಲ್ಲದವರು, ಸ್ವಾತಂತ್ರ್ಯಪ್ರಿಯರೂ ಇರುವರು. ಫ್ರಾನ್ಸವು ರೇಶಿಮೆ ಮತ್ತು ಉಣ್ಣೆಯ ನಯುವಾದ ಬಟ್ಟೆಗಳನ್ನು ತಯಾರಿಸುವ ಯಂತ್ರಾಲಯುಗಳನ್ನೂ, ಮೋಟರ ರಚಿಸುವ ಕಾರ್ಯಾಲಯುಗಳನ್ನೂ ಇಟ್ಟುಕೊಂಡಿರುವದು. ಅನಂತರ ಬೆಲ್ಜಿಯಮ್ಮದ ರಾಜಧಾನಿಯಾದ ಬ್ರುಸೆಲ್ಸಕ್ಕೆ ಪ್ರಯಾಣಮಾಡಿ ಅಲ್ಲಿ ತಯಾರಾಗುವ ರತ್ನಗಂಬಳಿಗಳ ಕಾರ್ಯಾಲಯ, ವಾಟರ್ಲೂದಲ್ಲಿಯ ರಣಭೂಮಿ, ಆ್ಯಂಟ್ವರ್ಪದ ಅಗಾಧವಾದ ಕೋಟೆಗಳನ್ನು ಶಂಕರನು ನೋಡಿದನು. ಆ ಮೇಲೆ ಅವನು ಸ್ವಿಡ್ಜರ್ಲಂಡದಲ್ಲಿಯ ಜಿನೇವಾ ಪಟ್ಟಣಕ್ಕೆ ಹೋಗಿ ಅಲ್ಲಿಯ ಗಡಿಯಾರಗಳ ಕಾರ್ಯಾಲಯುಗಳಿಗೆ ಭೆಟ್ಟಿಕೊಟ್ಟನು. ಅವನು ಮುಂದೆ ಜರ್ಮನಿಗೆ ತೆರಳಿ ಬರ್ಲಿನ್ ಪಟ್ಟಣಕ್ಕೆ ಬಂದನು. ಇದು ಯುರೋಪದಲ್ಲಿ ಮೂರನೆಯ ದೊಡ್ಡ ಪಟ್ಟಣವು. ಜನರು ಅತಿ ಉದ್ಯೋಗಿಗಳೂ,

ಶೂರರೂ, ಸಾಹಸಿಗಳೂ, ಯಂತ್ರ ಕಲಾವಿದರೂ, ವಿಜ್ಞಾನಿಗಳೂ, ತತ್ವವೇತ್ತರೂ ಆಗಿರುವರು. ಜರ್ಮನಿಯಲ್ಲಿ ಒತ್ತಾಯ ಶಿಕ್ಷಣವಿರುವದ ರಿಂದ ೧೦೦ಕ್ಕೆ ೯೯ ಜನರು ವಿದ್ಯಾವಂತರು. ಅಲ್ಲಿ ೨೧ ವಿಶ್ವವಿದ್ಯಾಲಯಗಳುಂಟು. ಜರ್ಮನಿಯು ಸಂಸ್ಕೃತ ವಿದ್ಯಾಭ್ಯಾಸಕ್ಕೆ ಪ್ರಶಸ್ತಿಯನ್ನು ಕೊಟ್ಟು ಮ್ಯಾಕ್ಸಮುಲ್ಲರರಂಥ ಅಸಾಧಾರಣ ವ್ಯಕ್ತಿಗಳನ್ನು ಬೆಳಕಿಗೆ ತಂದಿರುವದು. ಕಬ್ಬಿಣ, ಉಕ್ಕುಗಳಿಂದ ತಯಾರಾಗುವ ಸಾಮಾನುಗಳು ಜಗತ್ತಿನ ಎಲ್ಲ ಭಾಗಕ್ಕೆ ಕಳುಹಲ್ಪಡುವವು. ಕ್ರುಪ್ ಕಾರ್ಯಾಲಯವು ಅತಿದೊಡ್ಡದು. ಅಲ್ಲಿ ಒಂದು ಲಕ್ಷ ಜನ ಕೆಲಸಗಾರರಿರುವರು.

ಶಂಕರನು ರಶಿಯಾಕ್ಕೆ ಪ್ರಯಾಣಮಾಡಿ ಮಾಸ್ಕೋ ಪಟ್ಟಣಕ್ಕೆ ಬಂದನು. ಅಲ್ಲಿ ಪ್ರಜಾರಾಜ್ಯವು ೧೯೧೮ರಲ್ಲಿ ಝಾರ ರಾಜನ ಕೊಲೆಯಾದನಂತರ ಪ್ರಾರಂಭವಾಗಿತ್ತು. ಜನರು ಭವ್ಯಕಾಯದವರು. ಆದರೆ ವಿದ್ಯೆಯಲ್ಲಿ ಹಿಂದುಳಿದವರು. ಸ್ಟ್ಯಾಲಿನ್ನನು ರಾಜ್ಯಸೂತ್ರವಹಿಸಿ ಸಮತಾವಾದ ಪದ್ಧತಿಯನ್ನು ಪ್ರಯೋಗಮಾಡಿದ್ದನು. ಎಲ್ಲ ಆಸ್ತಿಗಳೂ ಸರಕಾರದ ಆಡಳಿತೆಯಲ್ಲಿದ್ದವು. ವ್ಯಕ್ತಿಗೆ ಆಸ್ತಿ ಸಂಪಾದನೆಯ ಹಕ್ಕು ಇಲ್ಲ. ವ್ಯಕ್ತಿಗಳಿಗೆ ಉದ್ಯೋಗ ಹಾಗು ಜೀವನೋಪಾಯ ಸರಕಾರವೇ ಕಲ್ಪಿಸಿಕೊಡುವ ಹೊಣೆಯುಳ್ಳದ್ದು. ಬೇಸಾಯದ ಉದ್ಯೋಗ ಮುಖ್ಯವಾದದ್ದು. ಇತ್ತೀಚೆಗೆ ರಶಿಯವು ಯಾಂತ್ರಿಕ ಬೆಳವಣಿಗೆ ಮಾಡಿಕೊಂಡಿದೆ. ಎರಡನೆಯ ಮಹಾಯುದ್ಧದಲ್ಲಿ (೧೯೪೫) ಟ್ಯಾಂಕ್, ವಿಮಾನ, ಸಿಡಿಮದ್ದು, ಅಣುಬಾಂಬು ಮೊದಲಾದವುಗಳನ್ನು ತಯಾರಿಸಿಕೊಂಡು ಜಗತ್ತಿನಲ್ಲಿ ಒಂದು ಮಹಾಶಕ್ತಿಯ ರಾಷ್ಟ್ರವಾಗಿದೆ. ರಶಿಯಾದಲ್ಲಿ ಲೆನಿನ್ ಗ್ರ್ಯಾಡ, ಪೆಟ್ರೊಗ್ರ್ಯಾಡ್ ಮುಂತಾದ ಪಟ್ಟಣಗಳಲ್ಲಿ ಸಂಚರಿಸಿದನಂತರ ಅವನು ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲ್ ಮುಂತಾದ ತತ್ವಜ್ಞಾನಿಗಳ ಆಗರವಾಗಿದ್ದ ಅಥೆನ್ಸ ಪಟ್ಟಣಕ್ಕೂ, ಪೂರ್ವದಲ್ಲಿ ಮಹಾ ಚಕ್ರಾಧಿಪತ್ಯವನ್ನನುಭವಿಸಿದ ಹಾಗು ಕಾಯಿದೆ ರಚನೆಯಲ್ಲಿ ಮೊದಲನೆಯದಾದ ಇಟಲಿ ದೇಶಕ್ಕೆ ತೆರಳಿದನು. ರೋಮ ಪಟ್ಟಣವನ್ನು ನೋಡಿ ಅಲ್ಲಿಯ ಪೂರ್ವ ವೈಭವದ ಅವಶೇಷಗಳನ್ನು ಕಂಡನು. ಜಗತ್ತಿನಲ್ಲೆಲ್ಲಿಯೂ ಇಲ್ಲದಂಥ ಭವ್ಯವಾದ ಕ್ರೈಸ್ತ

ದೇವಾಲಯುಗಳನ್ನು ನೋಡಿ ಬೆರಗಾದನು ಕ್ರೈಸ್ತ ಮತಾನು ಯಾಯಿಗಳ ಜಗದ್ಗುರುವಾದ ಪೋಪನ ಭೆಟ್ಟಿಯಾಗಿ ಆತನ ವೊದಲಿನ ಪ್ರಭಾವ, ವರ್ಚಸ್ಸುಗಳ ನೆರಳನ್ನು ಮಾತ್ರ ಕಂಡುಕೊಂಡನು. ಅಲ್ಲಿಂದ ನೇಪಲ್ಸ ಬಂದರಕ್ಕೆ ತೆರಳಿ ಹಡಗಿನ ಮೂಲಕ ಮಾಲ್ಟಾ, ಪೋರ್ಟ ಸೈಯ್ಯದ, ಏಡನ್ ಬಂದರಗಳ ಮಾರ್ಗದಿಂದ ಅವನು ಮುಂಬಯಿಗೆ ಬಂದನು.

ಮುಂಬಯಿ ಬಂದರಲ್ಲಿ ಅವನು ಹಡಗದಿಂದಿಳಿದಾಗ ಸದಾಶಿವ ರಾಯನೂ, ಶಂಕರನ ತಂದೆ ತಾಯಿಗಳೂ, ಅವನ ಸ್ನೇಹಿತರೂ, ಕೆಲವು ಸರಕಾರಿ ನೌಕರರೂ ಅವನನ್ನು ಹಿಂದುಸ್ಥಾನದ ಮಹಾದ್ವಾರದಲ್ಲಿ (Gateway of India) ಸ್ವಾಗತಮಾಡಿದರು. ಅವನು ಆ ದಿನ ಸೆಕ್ರೆಟೇರಿಯಟ್ ಆಫೀಸಿಗೆ ಭೆಟ್ಟಿಕೊಟ್ಟನು. ಅದೇ ದಿನ ಅವನನ್ನು ಸೂರತ ಜಿಲ್ಲೆಯ ಅಸಿಸ್ಟಂಟ ಕಲೆಕ್ಟರನನ್ನಾಗಿ ನೇಮಿಸಿದ ಆಜ್ಞೆಯು ಅವನ ಕೈಗೆ ದೊರಕಿತು. ಅವನ ತಂದೆ ತಾಯಿಗಳೂ, ಸದಾಶಿವರಾಯನೂ ಅವನು ಸ್ವದೇಶಕ್ಕೆ ಸುರಕ್ಷಿತವಾಗಿಯೂ, ಯಶಸ್ವಿಯಾಗಿಯೂ ಬಂದದ್ದ ಕ್ಕಾಗಿ ಬಹಳ ಆನಂದಪಟ್ಟರು. ಶಂಕರನು ಸದಾಶಿವರಾಯನ ಸಂಗಡ ಪುಣೆಗೆ ಹೋಗಿ ೪-೬ ದಿನಗಳವರೆಗೆ ವಿಶ್ರಾಂತಿಪಡೆದು ಸೂರತಕ್ಕೆ ಹೋಗಿ ಅಧಿಕಾರವಹಿಸಿದನು. ಅವನು ಒಂದು ವರ್ಷ ಕಾಲ ಉತ್ತಮನಾಗಿ ಕೆಲಸ ಮಾಡಿದನಂತರ ಸರಕಾರವು ಅವನ ಕಾಯಿದೆ ಕೌಶಲ್ಯ ಹಾಗು ನ್ಯಾಯ ನಿರ್ಣಯದಲ್ಲಿ ಅವನು ತೋರಿಸಿದ ಚತುರತನಗಳಿಗೆ ಮೆಚ್ಚಿ ಅವನನ್ನು ಪುಣೆಯ ಜಿಲ್ಲೆಯ ನ್ಯಾಯಾಧೀಶನನ್ನಾಗಿ ನೇಮಿಸಿತು.

ಈ ವೊದಲು ೨ನೆಯ ಪ್ರಕರಣದಲ್ಲಿ ನಾವು ಸದಾಶಿವರಾಯನಿಗೆ ಒಬ್ಬಳೇ ಮಗಳಿದ್ದಳೆಂದೂ ಅವನಿಗೆ ಗಂಡು ಸಂತತಿಯಿರಲಿಲ್ಲವೆಂದೂ ಹೇಳಿರುವದು ಓದುಗರ ನೆನಪಿನಲ್ಲಿರಬಹುದು ಈ ವೇಳೆಗೆ ಸದಾಶಿವ ರಾಯನು ೭೦ ವರ್ಷದ ವಯಸ್ಸಿನವನಾಗಿದ್ದನು. ಅವನು ತನ್ನ ಮಗ ಳಾದ ಸುಶೀಲೆಯನ್ನು ಶಾಲೆಗೆ ಕಳುಹಿ ವಿದ್ಯಾಸಂಪನ್ನಳನ್ನಾಗಿ ಮಾಡಿ ದ್ದನು ಅವಳು ಅದೇ ವರ್ಷ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ದ್ದಳು. ಸದಾಶಿವರಾಯನಿಗೆ ಬೇರೆ ಕಡೆಯಲ್ಲಿ ಆಕೆಗೆ ವರನನ್ನು ಹುಡು

ಕುವ ಇಚ್ಛೆ ಇರಲಿಲ್ಲ. ಆದರೆ ಅವನಿಗೆ ಒಂದು ಸಾಮಾಜಿಕ ಸಮಸ್ಯೆಯು ತೊಡಕು ಇದ್ದಿತು. ಅದೇನೆಂದರೆ ತಾನು ಬ್ರಾಹ್ಮಣನು ಶಂಕರನು ಮರಾಠಾ ಕುಲದವನು. ಆದರೂ ಶಂಕರನು ತನ್ನ ಮನೆಯಲ್ಲಿಯೇ ಪೋಷಿತವಾಗಿ ಬ್ರಾಹ್ಮಣನಂತೆ ಸಂಸ್ಕಾರ ಹೊಂದಿದ್ದನು. ಇದರ ಮೇಲೂ ಮೇಲ್ತರದ ವಿದ್ಯೆ ಸಂಪಾದಿಸಿ ೨೨ನೆಯ ವಯಸ್ಸಿನಲ್ಲಿಯೇ ಉನ್ನತ ಅಧಿಕಾರವನ್ನು ಪಡೆದಿದ್ದನು. "ಜನ್ಮನಾ ಜಾಯತೇ ಶೂದ್ರ: ಕರ್ಮಣಾದ್ವಿಜವುಚ್ಯತೆ" ಎಂಬ ಶಾಸ್ತ್ರೋಕ್ತಿಗನುಸಾರವಾಗಿ ವಿಶ್ವಾಮಿತ್ರನು ಸಹ ಆಚರಣೆಯಿಂದ ಬ್ರಹ್ಮರ್ಷಿಯಾದನು. ಜಾತಿ ಪದ್ಧತಿಯು ಮನುಷ್ಯ ಕಲ್ಪಿತವು. ಶೀಲ, ಸಂಸ್ಕಾರಗಳಿಂದ ಯಾವ ಜಾತಿಯವನಾದರೂ ಶ್ರೇಷ್ಠ ಕುಲದವನಾಗಬಲ್ಲನು, ಈ ಬಗೆಯ ವಿಚಾರಗಳಿಂದ ಸದಾಶಿವರಾಯನ ಸಂಶಯವು ನಿವಾರಣೆಯಾಯಿತು. ಆದರೆ ಮಗಳು ಸುಶಿಕ್ಷಿತಳು. ಅವಳ ಅಭಿಪ್ರಾಯವನ್ನು ತೆಗೆದುಕೊಳ್ಳದೆ ನಿಶ್ಚಯಿಸುವದು ಸರಿಯಲ್ಲವೆಂದು ಸದಾಶಿವರಾಯನಿಗೆ ಹೊಳೆಯಿತು.

ಅವನು ಮಗಳನ್ನು ಕೂಡ್ರಿಸಿಕೊಂಡು ಒಮ್ಮೆಲೇ ಅವಳ ಅಭಿಪ್ರಾಯವನ್ನು ಕೇಳದೆ ಶಂಕರನ ಸುದ್ದಿಯನ್ನು ಪ್ರಸ್ತಾಪಿಸಿ ಅವನಿಗೆ ಎಲ್ಲಿಯಾದರೂ ಕನ್ನೆಯನ್ನು ಗೊತ್ತು ಹಚ್ಚಿ ಲಗ್ನಮಾಡಬೇಕೆಂತಲೂ ಮತ್ತು ಅವಳಿಗೆ ಸಹ ಒಬ್ಬ ವರನನ್ನು ಹುಡುಕಬೇಕೆಂತಲೂ ಆಡಿತೋರಿಸಿದನು. ಅದೇ ಕಾಲಕ್ಕೆ ತನ್ನ ಆಪ್ತರಲ್ಲಿರುವ ಕೆಲವು ವರರ ಹೆಸರನ್ನು ಸೂಚಿಸಿದನು. ಅವರಲ್ಲಿ ಕೆಲವರು ಶ್ರೀಮಂತರಿದ್ದರೆ ವಿದ್ಯಾವಿಹೀನರಾಗಿದ್ದರು. ಕೆಲವರು ಸಾಕಷ್ಟು ವಿದ್ಯಾವಂತರಿದ್ದರೂ ಶ್ರೀಮಂತಿಕೆಯಿಲ್ಲದವರೂ ಅಥವಾ ಸಣ್ಣ ನೌಕರಿಯಲ್ಲಿದ್ದವರೂ ಆಗಿದ್ದರು. ಸುಶೀಲೆಯು ಅವರ ಹೆಸರುಗಳನ್ನು ಕೇಳಿದಾಗ ಮುಖ ಬಗ್ಗಿಸಿದಳು. ಇದನ್ನು ಕಂಡು ಸದಾಶಿವರಾಯನು, "ಸುಶೀಲೆ, ಹಾಗಾದರೆ ನಿನ್ನನ್ನು ಶಂಕರನಿಗೆ ಲಗ್ನ ಮಾಡಿದರೆ ಒಪ್ಪುವಿಯಾ?" ಎಂದು ಕೇಳಿದನು. ಆಗ ಸುಶೀಲೆಯು ಪ್ರಫುಲ್ಲಮುಖದಿಂದ ಮುಗುಳು ನಗೆ ನಗುತ್ತ "ಅಪ್ಪಾ, ಆತನು ನಿನ್ನ ಪ್ರೀತಿಗೆ ಪಾತ್ರನು ಮತ್ತು ನಿನ್ನ ಸಹಾಯದಿಂದ ಉನ್ನತ ಸ್ಥಾನಪಡೆದವನು. ಈ ನಿನ್ನ ಸೂಚನೆಗೆ ನಾನು ಒಪ್ಪಿದಲ್ಲಿ ನೀನು

ಕಟ್ಟಿದ ಮಂದಿರಕ್ಕೆ ಕಳಸವನ್ನಿಟ್ಟಂತಾಗುವದು,'' ಎಂದಳು. ಈ ಮಾತನ್ನು ಕೇಳಿ ಸದಾಶಿವರಾಯನಿಗೆ ಪರಮಾನಂದವಾಯಿತು.

ಸುಶೀಲೆಯು ಶ್ರೀಮಂತನ ಮಗಳಾಗಿದ್ದರೂ ಅವಳಲ್ಲಿ ಗರ್ವವು ಎಳ್ಳಷ್ಟಾದರೂ ಇದ್ದಿಲ್ಲ. ಅವಳಲ್ಲಿದ್ದ ನಯ, ವಿನಯ, ಸೌಮ್ಯಗುಣಗಳು ಅವಳಿಗೆ ಆಭರಣಗಳಾಗಿದ್ದವು. ಅವಳ ಸೌಂದರ್ಯಕ್ಕೆ ವಿದ್ಯೆಯು ವಿಶೇಷ ಶೋಭೆಯನ್ನುಂಟುಮಾಡಿತ್ತು. ಶಂಕರನು ಅವಳಿಗೆ ಅನುಗುಣನಾದ ವರನಾಗಿದ್ದನು. ಅವನಾದರೂ ರೂಪವಂತನಾಗಿದ್ದನು. ಸುಶೀಲೆಯ ಕಾಯಕಾಂತಿಯಂತೆಯೇ ಅವನ ವರ್ಣವು ಬಂಗಾರ ವರ್ಣದ್ದಾಗಿತ್ತು. ಅವರೀರ್ವರೂ ಮಧ್ಯವರ್ತಿ ನಿಲುವಿನವರು, ತೆಳುವಾದ ದೇಹಾಕೃತಿಯವರು, ತೀಕ್ಷ್ಣ ಬುದ್ಧಿಯವರು, ಕಾರ್ಯತತ್ಪರರು, ಚಟುವಟಿಕೆಯಲ್ಲಿ ಚಾಣಾಕ್ಷರು; ಪ್ರಾಣಿದಯಾಪರರು; ಸ್ನೇಹಿತರಲ್ಲಿ ಸಹಜಪ್ರೇಮಿಗಳು; ನಂಬಿದವರಲ್ಲಿ ಸಚ್ಚು ಮೆಚ್ಚು ಪಡೆದವರು. ಮಗಳು ತನ್ನ ಮನೋರಥಕ್ಕೆ ಒಪ್ಪಿಗೆ ಕೊಟ್ಟಾಗ್ಯೂ ಅವಳೊಂದಿಗೆ ತನಗಿದ್ದ ಸಂಶಯವನ್ನು ನಿವಾರಣೆ ಮಾಡಿಕೊಳ್ಳಲು ಸದಾಶಿವರಾಯನು ಇಚ್ಛಿಸಿದನು. ಅವನು ಮಗಳನ್ನು ಕುರಿತು, "ತಂಗೀ, ನೀನು ಶಂಕರನ ವಧುವಾಗಲು ಒಪ್ಪಿದ್ದು ಸರಿಯಷ್ಟೇ! ಆದರೆ ಇದರಿಂದ ಸಮಾಜದ ಕಟ್ಟನ್ನು ಮುರಿದಂತಾಗುವದಲ್ಲವೇ?" ಎಂದು ಪ್ರಶ್ನೆ ಮಾಡಿದನು, ಆಗ ಸುಶೀಲೆಯು, "ಅಪ್ಪಾ, ಈಗ ಮೊದಲಿನಂತೆ ಸಮಾಜದ ಕಟ್ಟು ಬಿಕ್ಕಟ್ಟಾಗಿರುವದಿಲ್ಲ. ಅದು ಎಷ್ಟೋ ಸಡಿಲಾಗಿ ಹೋಗಿದೆ. ಈಗ ಎಷ್ಟೋ ಮಿಶ್ರ ಜಾತಿಯ ಮದುವೆಗಳು ಜರುಗಿವೆ. ಉದಾಹರಣೆಗಾಗಿ, ಇಂಥವರು, ಇವರು.... ಅವರು....ಹೀಗೆ ನೂರಾರು ದೃಷ್ಟಾಂತಗಳನ್ನು ಕೊಡಬಹುದು. ಅದೇಕೆ ಭಾರತದ ಎಷ್ಟೋ ತರುಣರು ಯುರೋಪಿಯನ್ ತರುಣಿಯರನ್ನು ಮದುವೆಯಾಗಿದ್ದಾರೆ. ಹಾಗೆಯೇ ನಮ್ಮ ಸ್ತ್ರೀಯರಲ್ಲಿ ಕೆಲವರು ಯುರೋಪಿಯನ್ ಪುರುಷರೊಡನೆ ಮದುವೆಯಾದ ಉದಾಹರಣೆಗಳೂ ಉಂಟು. ಅವರಿಗೆ ಯಾವ ಆತಂಕ ಅಥವಾ ತೊಂದರೆಗಳುಂಟಾಗಿರುವವು, ಹೇಳುವಿಯಾ?" ಎಂದಳು.

ಮಗಳ ಈ ಬಗೆಯ ಉತ್ತರವನ್ನು ಕೇಳಿ ಸದಾಶಿವರಾಯನು ನಿರುತ್ತರನಾದನು. ಅವನು ಅದೇ ದಿನವೇ ಶಂಕರನು ಕೋರ್ಟಿನಿಂದ ಮನೆಗೆ ಬಂದ ಮೇಲೆ ಆತನ ಮದುವೆಯ ಪ್ರಸ್ತಾಪವನ್ನೆತ್ತಿ ಸುಶೀಲೆ ಯೊಡನೆ ಅವನ ವಿವಾಹ ಮಾಡುವ ಆಲೋಚನೆಯನ್ನು ಸೂಚಿಸಿದನು. ಈ ವರೆಗೆ ಶಂಕರನ ತಲೆಯಲ್ಲಿ ಮದುವೆಯ ವಿಚಾರವೇ ಇರಲಿಲ್ಲ. ಸದಾಶಿವರಾಯನ ಸೂಚನೆಯು ಅವನಿಗೆ ಒಮ್ಮೆಲೇ ಆಶ್ಚರ್ಯವನ್ನುಂಟು ಮಾಡಿತು. ತನ್ನನ್ನು ಸಾಕಿಸಲಹಿದವನು, ತನಗೆ ವಿದ್ಯಾಭ್ಯಾಸದ ಸೌಲಭ್ಯ ಕಲ್ಪಿಸಿಕೊಟ್ಟವನು, ತನ್ನ ಜಾತಿಭೇದವನ್ನೆಣಿಸದೆ ಹೀಗೆ ತನಗೆ ಮಗಳನ್ನು ಕೊಟ್ಟು ಮದುವೆ ಮಾಡುವನೆಂಬ ಕಲ್ಪನೆಯು ಅವನ ಕನಸುಮನಸ್ಸುಗಳಲ್ಲಿ ಸಹ ಬಂದಿರಲಿಲ್ಲ. ಆಗ ಶಂಕರನು ಸದಾಶಿವ ರಾಯನು ತನಗೆ ಮಾಡಿದ ಉಪಕಾರವನ್ನು ಬಣ್ಣಿಸಲಿಕ್ಕೆ ಶಕ್ತನಾಗದೆ ಹೀಗೆ ಹೇಳಿದನು, "ಪೂಜ್ಯನೇ, ನಿನ್ನಿಂದ ನನ್ನ ಜನ್ಮವು ಸಫಲವಾಗಿದೆ, ನನ್ನ ಉದ್ಧಾರವಾಗಿದೆ, ಈ ನಿನ್ನ ಸೂಚನೆಯಿಂದ ನಾನು ನಿನಗೆ ಮತ್ತಷ್ಟು ಋಣಿಯಾಗುವ ಪ್ರಸಂಗವು ಬಂದೀತು. ದೇವಸಂಕಲ್ಪ ವಿದ್ದರೆ ನಿನ್ನ ಸೂಚನೆಯನ್ನು ಮಾನ್ಯಮಾಡುವುದು ನನ್ನ ಕರ್ತವ್ಯ ವಾಗಿದೆ" ಎಂದನು.

ಶಂಕರನ ನಮ್ರವಾದ ನುಡಿಗಳನ್ನು ಕೇಳಿ ಸದಾಶಿವರಾಯನ ಹೃದಯವು ಉಕ್ಕಿತು, ಮನಸ್ಸು ಹರ್ಷದ ಮೇರೆಯನ್ನು ಮಿಕ್ಕಿತು. ಆ ಮೇಲೆ ಸದಾಶಿವರಾಯನು ಶಂಕರನ ತಂದೆತಾಯಿಗಳನ್ನು ಕರೆಯಿಸಿ ಕೊಂಡು ಅವರ ಮುಂದೆ ತನ್ನ ವಿಚಾರವನ್ನಿರಿಸಿದನು. ಅದನ್ನು ಕೇಳಿ ಅವರ ಆನಂದಕ್ಕೆ ಪಾರವೇ ಇಲ್ಲದಾಯಿತು. ಅಶಿಕ್ಷಿತರೂ, ಮುಗ್ಧರೂ ಆದ ಅವರಿಗೆ ಉಳಿದ ಸಾಮಾಜಿಕ ಸಮಸ್ಯೆಗಳ ಭಾವನೆಯೇ ತಲೆಯಲ್ಲಿ ಅಂಕುರಿಸಲಿಲ್ಲ. ಆ ಮೇಲೆ ಸದಾಶಿವರಾಯನು ತನ್ನ ಆಪ್ತಮಿತ್ರ ರೊಡನೆ ಆಲೋಚಿಸಿ ಎಲ್ಲರ ಒಪ್ಪಿಗೆ ಪಡೆದು ಮಗಳ ಮದುವೆಯ ಕಾರ್ಯವನ್ನು ಹಮ್ಮಿದನು. ಶ್ರೀಮಂತರಿಗೆ ಯಾವದರ ಅಭಾವ? ಶುಭಮುಹೂರ್ತ ನಿಶ್ಚಯಿಸಲ್ಪಟ್ಟಿತು. ಭವ್ಯವಾದ ಲಗ್ನಮಂಟಪವು ರಚಿಸಲ್ಪಟ್ಟಿತು. ಅಂದವಾದ ವೇದಿಕೆಯು ವಧೂವರರ ಆಸನ

ಕ್ಕಾಗಿ ನಿರ್ಮಿಸಲ್ಪಟ್ಟಿತು. ತಳಿರು, ತೋರಣ, ಝೂಲರಿ, ಚಿತ್ರ ಪಟಗಳಿಂದ ಮಂಟಪವು ಸಿಂಗರಿಸಲ್ಪಟ್ಟಿತು. ಸನಾಯಿ, ಬ್ಯಾಂಡು ಮುಂತಾದ ವಾದ್ಯಗಳ ಮಂಗಲ ಧ್ವನಿಯು ಅತಿಥಿಗಳನ್ನು ಸ್ವಾಗತಮಾಡಿತು. ಸಾವಿರಾರುಜನ ಪಟ್ಟಣಿಗರೂ ಅನೇಕ ದೊಡ್ಡ ಸರಕಾರಿ ಅಧಿಕಾರಿಗಳೂ ನಿಶ್ಚಿತವೇಳೆಗೆ ಬಂದು ಲಗ್ನ ಮಂಟಪವಲ್ಲಿ ಮಂಡಿತರಾದರು. ಪುರೋಹಿತರು ಮಂತ್ರಪಠಿಸುತ್ತ ವಧೂವರರಿಗೆ ಮಂಗಲವನ್ನು ಬಯುಸಿ ಮಂತ್ರಾಕ್ಷತೆಗಳನ್ನು ಹಾಕಿದರು. ಆಗ ಅತಿಥಿಗಳೆಲ್ಲರೂ ಮಂತ್ರಾಕ್ಷತೆಯ ಮಳೆಯನ್ನು ಕರೆದರು. ವಧೂವರರಿಗೆ ಅನೇಕರು ಆಭರಣಗಳ, ಬಟ್ಟೆಗಳ, ನಾಣ್ಯಗಳ ರೂಪದಿಂದ ಕಾಣಿಕೆಗಳನ್ನು ಸಲ್ಲಿಸಿದರು. ಆ ಮೇಲೆ ಎಲ್ಲ ಅತಿಥಿಗಳಿಗೂ ಪಕ್ವಾನ್ನ ಹಣ್ಣು ಹಂಪಲುಗಳಿಂದ ತೃಪ್ತಿಮಾಡಲಾಯಿತು. ಸಂಧ್ಯಾಕಾಲಕ್ಕೆ ಆಡಂಬರದಿಂದ ಪಟ್ಟಣದ ಮುಖ್ಯಬೀದಿಗಳಲ್ಲಿ ರಥದಲ್ಲಿ ಮೆರವಣಿಗೆಯನ್ನು ಮಾಡಲಾಯಿತು. ಆಗ ವಧೂವರರು ಇಂದ್ರಶಚಿಯರಂತೆ ಹರ್ಷೋನ್ಮುಖಿಗಳಾಗಿ ಶೋಭಿಸಿದರು.

ಸದಾಶಿವರಾಯನಿಗೆ ಗಂಡು ಸಂತತಿಯಿಲ್ಲದ್ದರಿಂದ ಈ ವರೆಗೆ ಅವನ ಕೇವಲ ಪೋಷಿತನಾಗಿದ್ದ ಶಂಕರನು ಈಗ ಅಳಿಯತನದ ಬಾಂಧವ್ಯದಿಂದ ಅವನ ಎಲ್ಲ ಆಸ್ತಿಗೆ ಒಡೆಯನಾಗುವ ಸಮಯ ಲಭಿಸಿತು. ಪೂರ್ವಜನ್ಮದ ಪುಣ್ಯ ಪ್ರಭಾವದಿಂದ ಸುದೈವವು ಸಹಜವಾಗಿ ಪಕ್ವವಾಗುವದು. ದೈವಬಲವುಂಟಾದಲ್ಲಿ ಸಂಪತ್ತು ತಾನಾಗಿಯೇ ಬೆಂಬತ್ತಿ ಬರುವದು. ದುರ್ದೈವಯೋಗವುಂಟಾದಲ್ಲಿ ಬತ್ತಿದ ಕೆರೆಯಂತೆ ಐಶ್ವರ್ಯವು ಅಡಗುವದು. ದೈವಲೀಲೆಯು ಮನುಷ್ಯನಿಗೆ ಅಗಾಧವಾಗಿ ತೋರುವದು. ಬಡವನಾಗಿ ಹುಟ್ಟಿದವನು ಬಲ್ಲಿದನಾಗುವನು ಧನಿಕನಾಗಿ ಹುಟ್ಟಿದವನು ದರಿದ್ರನಾಗುವನು. ಇದಕ್ಕೆ ಕಾರಣವೇನಿರಬಹುದೆಂಬದು ಒಂದು ದೊಡ್ಡ ಸಮಸ್ಯೆ. ಆದರೆ ಸೃಷ್ಟಿನಿಯಮದಲ್ಲಿ ಕಾರಣವಿಲ್ಲದೆ ಪರಿಣಾಮವೆಂದೂ ಘಟಿಸುವದಿಲ್ಲವೆಂಬದು ಅನುಭವದ ಸಂಗತಿಯಾಗಿದೆ. ಪೂರ್ವದ ಸದ್ವರ್ತನೆ, ಸಂಸ್ಕಾರ, ಪರೋಪಕಾರ, ದಾನ, ಧರ್ಮ ಪಾಲನೆಗಳು ಮುಂದಿನ ಕಾಲದ ಸುದೈವಕ್ಕೆ ಕಾರಣ

ಗಳಾಗಿವೆ. ಸುದೈವ ಅಥವಾ ದುರ್ದೈವಗಳು ಆಕಸ್ಮಾತ್ತಾಗಿ ಸಂಭವಿಸುವ ಸಂಗತಿಗಳಲ್ಲ. ನಾವು, ಬೇವುಗಳ ಬೀಜಗಳಂತೆ ಸವಿ, ಕಹಿ ಸ್ವರೂಪದ ಗಿಡಗಳನ್ನಾಗಿ ಬೆಳೆಯಿಸುವವು. ಸುದೈವ ಫಲ ಹೊಂದುವ ಇಂಗಿತವು ಸದ್ವರ್ತನೆಯ ಬೀಜ ಬಿತ್ತುವದರಲ್ಲಿದೆ. ಐಶ್ವರ್ಯವಾಗಲಿ, ಪಾಂಡಿತ್ಯವಾಗಲಿ ಅಥವಾ ಸದ್ಗುಣವಾಗಲಿ ಲಭಿಸಬೇಕಾದರೆ ಪೂರ್ವದ ಸಂಸ್ಕಾರಬಲವು ಇರಲೇಬೇಕು ಕೇವಲ ಒಡಹುಟ್ಟಿದ ಅಣ್ಣ ತಮ್ಮಂದಿರಲ್ಲಿ ಒಬ್ಬನು ಬುದ್ಧಿವಂತನು, ಮತ್ತೊಬ್ಬನು ಬುದ್ಧಿಹೀನನು, ಇನ್ನೊಬ್ಬನು ಶೀಘ್ರಕೋಪಿಯು, ಮತ್ತೋರ್ವನು ಶಾಂತನು ಹೀಗೆ ಭಿನ್ನ ಸ್ವಭಾವಿಗಳಾಗಿರುವ ಕಾರಣವೇನೆಂದರೆ ಅವರ ಪೂರ್ವದ ಸಂಸ್ಕಾರ ಭೇದವೆಂಬದು.

## ಪ್ರಕರಣ ೧೦

## ದುರಂಧರನ ಮನೆವಾರ್ತೆ

ಹಿಂದೆ ನಾವು ೮ನೆಯ ಪ್ರಕರಣದಲ್ಲಿ ದುರಂಧರನು ಸಾಧುವಿನ ಆಶ್ರಮದಲ್ಲಿ ಆಚರಿಸಿದ ಅನಾಚಾರವನ್ನೂ ಅವನಿಗೆ ಸಾಧುವು ಬೋಧಿಸಿದ ಉಪದೇಶವನ್ನೂ ಕೇಳಿದ್ದೇವೆ. ಆ ಉಪದೇಶವು ಅವನಿಗೆ ಕೇವಲ ವಿಷಪ್ರಾಯವಾಗ ತೋರಿತು. ಹಾವಿಗೆ ಕುಡಿಸಿದ ಹಾಲು ವಿಷವಾಗುವದಿಲ್ಲವೇ? ಮೊಸಳೆಗೆ ಮಾಡಿದ ಉಪಕಾರದ ಪ್ರತಿಫಲವು ಅಪಕಾರವಲ್ಲವೇ? ಅವನಿಗೆ ಮಾಡಿದ ಉಪದೇಶವು ಬೋರ್ಗಲ್ಲ ಮೇಲೆ ಮಳೆಗರೆದಂತಾಯಿತು, ಹಾಳು ಬಾವಿಯಲ್ಲಿ ನೀರನ್ನು ಸುರುವಿದಂತಾಯಿತು; ಗುಡ್ಡಕ್ಕೆ ಕಲ್ಲುಹೊತ್ತೊಯ್ದಂತಾಯಿತು; ಹಾಲಿನಲ್ಲಿ ಉಪ್ಪು ಬೆರೆಸಿದಂತಾಯಿತು. ಸ್ವಲ್ಪದರಲ್ಲಿ ಹೇಳಬೇಕಾದರೆ ಆ ಉಪದೇಶವು ದುರಂಧರನ ಕಿವಿಯಲ್ಲಿ ಕೋಣನಮುಂದೆ ಕಿನ್ನರಿಯನ್ನು ಬಾರಿಸಿದಂತೆ ನಿಷ್ಫಲವಾಯಿತು. ದುರಂಧರನು ತನ್ನ ದುಷ್ಟ ಸೇವಕನಾದ ಕಮಾಲನನ್ನು ಸೆರೆಯಿಂದ ಬಿಡಿಸಿಕೊಂಡು ಮನೆಗೆ ತೆರಳಿದನು.

ಅವನ ತಾಯಿಯು ತನ್ನ ಮಗನು ಸನ್ಮಾರ್ಗಿಯಾಗಲಿಲ್ಲವೆಂದು ಚಿಂತೆ ಹಚ್ಚಿಕೊಂಡಿದ್ದಳು. ಎಷ್ಟೋ ದಿನಗಳ ವರೆಗೆ ಅವನು ಮನೆಗೇ ಬರುತ್ತಿರಲಿಲ್ಲ. ಅವನು ಇಸ್ಪೇಟು, ಕುದುರೆಜೂಜು, ಹೆಡ್ಡದ ಆಟ ಮೊದಲಾದವುಗಳಲ್ಲಿ ಲಕ್ಷಾವಧಿ ಹಣವನ್ನು ಹಾಳುಮಾಡಿಕೊಂಡಿದ್ದನು. ಇದರ ಮೇಲೂ ಮಧ್ಯಪಾನ, ಅನ್ಯಸ್ತ್ರೀ ವ್ಯಾಸಂಗದ ವ್ಯಸನದಲ್ಲಿ ಮುಳುಗಿದ್ದನು. ಅವನು ತನ್ನ ಜಹಾಗೀರಿನ ಮುಕ್ಕಾಲಂಶ ಮೇಲ್ಪಟ್ಟು ಆಸ್ತಿಯನ್ನು ಮಾರಿದ್ದನು. ಇವೆಲ್ಲ ಕಾರಣಗಳು ಅವಳ ಚಿಂತೆಯನ್ನು ಹೆಚ್ಚು ಮಾಡಿದ್ದವು. ಪತಿವಿಯೋಗದ ದುಃಖದೊಡನೆ ಮಗನ ದುಸ್ಥಿತಿಯ ದುಃಖವೂ ಬೆರೆಯಿತು. ಇಷ್ಟೇ ಅಲ್ಲ, ಅವಳ ಸೊಸೆಯು ದುರಂಧರನಿಂದ ಪತಿಸುಖ ದೊರೆಯದ ಕಾರಣದಿಂದ ಜಲಸಮಾಧಿಯನ್ನು ಹೊಂದಿದ ಘಟನೆಯು ಅವಳ ಗಾಯದ ಮೇಲೆ ಬರೆಕೊಟ್ಟಂತಾಗಿತ್ತು.

ಅವಳ ಗಂಡನಾದ ಜಹಾಗಿರದಾರನು ಮರಣ ಹೊಂದಿದ ಮೇಲೆ ದುಃಖವಶಳಾಗಿ ಎಷ್ಟೋ ದಿನ ಹಾಸಿಗೆ ಹಿಡಿದಿದ್ದಳು. ಆ ಮೇಲೆ ಒಂದು ದಿನ ತನ್ನ ಬೆಂದ ಹೃದಯಕ್ಕೆ ಶಾಂತಿಯನ್ನು ಪಡೆಯಲು ಶಿವಾನಂದ ಸಾಧುವಿನ ಆಶ್ರಮಕ್ಕೆ ಹೋಗಿದ್ದಳು. ಸಾಧುವು ಅವಳ ಕಂದಿದ ಮುಖವನ್ನು ನೋಡಿ ಅವಳು ಪತಿವಿಯೋಗದ ದುಃಖದಲ್ಲಿರುವಳೆಂದು ಅರಿತುಕೊಂಡನು. ಆತನು ಅವಳ ದುಃಖ ನಿವಾರಣೆ ಮಾಡಲು ಬಯಸಿ, "ಅಮ್ಮಾ, ಏನು ಕಾರಣ ವ್ಯಸನ ಹಚ್ಚಿಕೊಂಡಿರುವಿ" ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಅವಳು ತನ್ನ ಪತಿಯ ಹಾಗು ಸೊಸೆಯ ಮರಣ ವೃತ್ತಾಂತವನ್ನೂ ಒಬ್ಬ ಮಗನಿದ್ದರೂ ಅವನು ದುರ್ಮಾರ್ಗಿಯಾಗಿರುವ ಸಂಗತಿಯನ್ನೂ ವಿವರಿಸಿ ಹೇಳಿ ತನಗೆ ಎಷ್ಟು ಐಶ್ವರ್ಯವಿದ್ದರೂ ಅದರಿಂದ ಸುಖ ಪ್ರಾಪ್ತಿಯಿಲ್ಲವೆಂದು ಉಸುರುತ್ತ ಬಿಕ್ಕಿ ಬಿಕ್ಕಿ ಅಳ ಹತ್ತಿದಳು. ಆಗ ಸಾಧುವು, "ಅಮ್ಮಾ, ಹಿಂದೆ ಮಾಡಿದ ಕರ್ಮಫಲವನ್ನು ಯಾರೂ ತಪ್ಪಿಸಿಕೊಳ್ಳಲಾರರು. ಮನೋಶಾಂತಿಯಿರದಿದ್ದರೆ ಎಷ್ಟು ಐಶ್ವರ್ಯವಿದ್ದರೇನು? ಅದರಿಂದ ಸುಖಲಭಿಸದು. ಯೋಗ್ಯವಾದ ದಾನ, ಧರ್ಮಗಳಿಗಾಗಿ ಹಣವಿನಿಯೋಗಿಸಿದರೆ ಅದರಿಂದ ತೃಪ್ತಿಯುಂಟಾಗು

ವದು, ಸುಖ ದೊರೆಯುವದು. ಜೀವನಂತೆ ಹಣ ಕಾಯ್ದಿಟ್ಟುಕೊಂಡರೆ ನಾಯಿಯ ಮೊಲೆಯ ಹಾಲು ನೈವೇದ್ಯಕ್ಕೆ ಸಲ್ಲದಂತೆ ಜೀವನಿಗೂ ಸುಖ ವಿಲ್ಲ, ಪರರಿಗೂ ಪ್ರಯೋಜನವಿಲ್ಲ. ಹುಟ್ಟು, ಸಾವುಗಳು ಮನುಷ್ಯ ನಿಗೆ ಸ್ವಾಭಾವಿಕವು. ದೇಹಕ್ಕೆ ಮರಣವುಂಟು. ಜೀವಾತ್ಮಕ್ಕೆ ಮರಣ ವಿಲ್ಲ. ಆತ್ಮಗಳೇ ಭೂಲೋಕದಲ್ಲಿ ಸತಿಪತಿ, ತಂದೆ ಮಕ್ಕಳು, ಅಣ್ಣ ತಮ್ಮಂದಿರು, ಆಪ್ತರು, ಸ್ನೇಹಿತರು ಎಂಬವರಾಗಿ ಜನ್ಮತಾಳುವರು. ಸಂಸಾರವು ಸಂತೆಯಂತಿದ್ದು ಅದರಲ್ಲಿ ಭೆಟ್ಟಿಯಾಗಿ ಹೋಗುವವರಂತೆ ಈ ಎಲ್ಲ ಬಂಧುಗಳಿರುವರು. ನೀನು ಈ ಕೆಲಕಾಲದ ಸಂಸಾರದ ಮಿಥ್ಯಾ ಮೋಹಕ್ಕೆ ಒಳಗಾಗದೆ ಪರಮಾತ್ಮನೆಂಬ ಪರಂಜ್ಯೋತಿಯನ್ನು ಹೊಂದಿ ನಿತ್ಯ ಸುಖ ಪಡೆಯುವ ಧರ್ಮಮಾರ್ಗವನ್ನು ಅನುಸರಿಸು. ದರಿದ್ರರಿಗೆ ದಾನ ಮಾಡು, ಕುರುಡ, ಕುಂಟ, ಅನಾಥರಿಗೆ ಅನ್ನವಸ್ತ್ರ ವಸತಿ ಸ್ಥಾನಗಳನ್ನು ಕಲ್ಪಿಸು. ಸದಾಕಾಲ ದೇವಸ್ಮರಣೆ ಮಾಡು. ಪ್ರಪಂಚದ ಅನಿತ್ಯ ವಸ್ತುಗಳಿಗೆ ಮನವೆಳಿಸಬೇಡ, ತ್ಯಾಗದಲ್ಲಿಯೇ ಭೋಗವಿದೆಯೆಂದು ನಂಬು. ಇದೇ ನನ್ನ ಆತ್ಮೋದ್ಧಾರದ ಮಾರ್ಗ ನಿನ್ನ ಮುಕ್ತಿಯ ಸೋಪಾನ."

ಈ ಪ್ರಕಾರ ಸಾಧುವು ದುರಂಧರನ ತಾಯಿಗೆ ಬೋಧೆ ಮಾಡಿ ದನು. ಅವಳು ಅದರಿಂದ ಪ್ರಸನ್ನಮುಖಳಾಗಿ ಜ್ಞಾನದ ಕಣ್ಣನ್ನು ಪಡೆದವಳಂತೆ ಜಾಗ್ರತಳಾದಳು.

ಆ ಮೇಲೆ ಅವಳು ಸಾಧುವಿಗೆ ನಮಸ್ಕಾರ ಮಾಡಿ ಆತನ ಆಶೀರ್ವಾದವನ್ನು ಪಡೆದುಕೊಂಡು ಹೊರಟಳು. ಅವಳ ಹೆಸರು ಪಾರ್ವತಿಬಾಯಿ. ಮನೆಗೆ ಬಂದನಂತರ ಅವಳು ಸಾಧುವಿನ ಉಪ ದೇಶದಿಂದ ಪ್ರೇರಿತಳಾಗಿ ತನ್ನಲ್ಲಿದ್ದ ಆಭರಣಗಳೆಲ್ಲವನ್ನು ಮಾರಿ ನಾಲ್ಕು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದಳು. ಅವಳು ಜಹಾಗಿರದಾರನ ಹೆಂಡತಿಯಾದುದರಿಂದ ಪೂರ್ವಜರು ಸಂಗ್ರಹಿಸುತ್ತ ಬಂದ ವಜ್ರ, ವೈಡೂರ್ಯ, ಮಾಣಿಕ್ಯ, ಪಚ್ಚ, ಹವಳ, ಮುತ್ತುಗಳ ಆಭರಣಗಳು ಅಧಿಕವಾದ ಬೆಲೆಯುಳ್ಳವಿದ್ದವು. ಪಾರ್ವತಿಬಾಯಿಯು ಕಟ್ಟಡ ಕಟ್ಟುವ ತಜ್ಞರನ್ನು ಕರೆಯಿಸಿ ಎರಡು ಲಕ್ಷ ಕ್ರಯದ ಭವ್ಯವಾದ

ಒಂದು ಧರ್ಮಶಾಲೆಯನ್ನು ಕಟ್ಟಿಸಿದಳು. ಅದರಲ್ಲಿ ಅಂಗಹೀನ ಮತ್ತು ಅನಾಥರಿಗೆ ಆಶ್ರಯವಿತ್ತು ಅವರ ಪೋಷಣೆಗಾಗಿ ಒಂದು ಲಕ್ಷ ರೂಪಾಯಿಗಳ ವಿಶ್ವಸ್ತ ನಿಧಿಯನ್ನಿಟ್ಟಳು. ಅವರಿಗೆ ಓದು ಬರಹ ಕಲಿಸುವದಕ್ಕಾಗಿ ಒಬ್ಬ ಶಿಕ್ಷಕನನ್ನು ನಿಯಮಿಸಿದಳು. ಕೆಲಕಾಲದ ಮೇಲೆ ಅವರನ್ನು ನೂಲುವ, ನೇಯುವ ಉದ್ಯೋಗಕ್ಕೆ ಹಚ್ಚಿ ಬಂದ ಉತ್ಪನ್ನವನ್ನು ಆ ಸಂಸ್ಥೆಯ ಹಿತಕ್ಕಾಗಿ ವಿನಿಯೋಗವಾಗುವಂತೆ ಮಾಡಿದಳು. ಅದೇ ಧರ್ಮಶಾಲೆಯ ಮಧ್ಯಭಾಗದಲ್ಲಿ ಒಂದು ಲಿಂಗವನ್ನು ಪ್ರತಿಷ್ಠೆಮಾಡಿ ದಿನಾಲು ಪ್ರಾರ್ಥನಾ, ಪೂಜೆಗಳು ಜರಗುವಂತೆ ವ್ಯವಸ್ಥೆಮಾಡಿದಳು. ತನ್ನ ಇಷ್ಟಾರ್ಥವು ಸಫಲವಾಯಿತೆಂದು ಅವಳು ಹರ್ಷಪಟ್ಟಳು.

ಈ ಧರ್ಮಕಾರ್ಯದ ಫಲವಾಗಿಯೋ ಏನೋ ಎಂಬಂತೆ ಮತ್ತು ದೇವನು ಅವಳನ್ನು ನರಜನ್ಮದಿಂದ ಮುಕ್ತಗೊಳಿಸಲು ಇಚ್ಛಿಸಿದನೋ ಎಂಬಂತೆ ಅವಳ ಮರಣಕಾಲವು ಸಮೀಪಿಸಿತು. ಮರಣ ಸಂಭವಿಸುವಾಗ ಏನಾದರೊಂದು ರೋಗ, ರುಜೆ, ಆಕಸ್ಮಿಕ ಸಂಗತಿಯು ಘಟಿಸುವದು. ಅವಳು ಮನೆಯಲ್ಲಿ ಕುಳಿತಾಗ ಗೋಡೆಯ ಮೇಲಿನ ಒಂದು ದೊಡ್ಡ ನಿಲುಗನ್ನಡಿಯು ಅವಳ ತಲೆಯ ಮೇಲೆ ಬಿದ್ದಿತು. ಅದರಿಂದ ಪೆಟ್ಟು ತಗಲಿ ಸ್ವಲ್ಪಕಾಲ ಅವಳಿಗೆ ಮೂರ್ಛೆಯುಂಟಾಯಿತು. ಆಗ ಮಗ ದುರಂಧರನು ಮನೆಯಲ್ಲಿರಲಿಲ್ಲ. ಮನೆಯ ಮುತಾಲಿಕನು ದುರಂಧರನು ವಾಡಿಕೆಯಾಗಿ ವಿನೋದ ಪಡೆಯುತ್ತಿದ್ದ ಮೂರು ನಾಲ್ಕು ವಿನೋದ ಕೂಟಗಳಿಗೆ (clubs) ಟೆಲಿಫೋನ್ ಮಾಡಿದನು. ಆದರೆ ಅವನು ಆಗ ಆ ಸ್ಥಳಗಳಲ್ಲೆಲ್ಲಿಯೂ ಇರದೆ ಇದ್ದುದರಿಂದ ಅವನಿಗೆ ವಾರ್ತೆಯು ಮುಟ್ಟದಾಯಿತು. ಆದರೆ ನೆರಹೊರೆಯ ಆಪ್ತೇಷ್ಟರು ಲಗುಬಗೆಯಿಂದ ಸೇರಿದರು. ಕೆಲಹೊತ್ತಿನ ಮೇಲೆ ಪಾರ್ವತಿಬಾಯಿಯು ಭ್ರಾಂತಿಯಿಂದ ಎಚ್ಚತ್ತಳು. ವೈದ್ಯರು ಅವಳಿಗೆ ಯೋಗ್ಯ ಚಿಕಿತ್ಸೆ ಮಾಡಿದರು. ಆದರೆ ಅವಳಿಗುಂಟಾದ ನೋವಿಗಿಂತ ಪರಲೋಕದ ಕರೆಯು ಬಲವಾಗಿದ್ದುದರಿಂದ ಹೊರಗಿನ ಉಪಚಾರದಿಂದ ಯಾವ ಪ್ರಯೋಜನವೂ ಆಗುವಂತಿರಲಿಲ್ಲ. ಅವಳು ಎಚ್ಚರವಾದಾಗ ಮಗನಿಗೆ ಮರಣಕಾಲದ ನಾಲ್ಕು ಮಾತುಗಳನ್ನು ಹೇಳಬಯಸಿ, "ತಮ್ಮ

ಧುರಂಧರಾ, ಎಲ್ಲಿರುವೆ, ಎಲ್ಲಿರುವೆ" ಎಂದು ಬಡಬಡಿಸಹತ್ತಿದಳು. ಆದರೆ ಅವನ ಸುಳುವನ್ನು ಕಾಣದೆ, "ದೇವರೇ ಅವನನ್ನು ಕಾಯಬೇಕು" ಎಂದು ನಿಟ್ಟುಸಿರು ಬಿಟ್ಟಳು.

ಮನುಷ್ಯನಿಗೆ ಮರಣವುಂಟಾಗುವಾಗ ಒಂದು ಗಂಭೀರವಾದ ಮತ್ತು ಚಿಂತಾಜನಕವಾದ ಪರಿಸ್ಥಿತಿಯು ಪಸರಿಸುವದು. ಸ್ವಾಭಾವಿಕವಾಗಿ ಮರಣವೆಂಬದು ಮನುಷ್ಯನಿಗೆ ಮಹಾಭಯವು. ಆಗ ದೇಹಯಾತನೆಯಿಂದ ನರಳುವಿಕೆಯಿರುವದಲ್ಲದೆ ಪ್ರಾಪಂಚಿಕ ವಾಸನೆಗಳ ಅವಶೇಷದ ಆಶೆಗಳಿಂದ ಜೀವವನ್ನು ತೊರೆಯಲು ಇಷ್ಟಪಡದೆ ಮನೋತಾಪದ ಕಳವಳವು ಸಹ ಇರುವದು. ದೇಹವು ವಾಸಿಸಲು ಅಯೋಗ್ಯವಾದಾಗ ಜೀವವು ದೇಹದಿಂದ ನುಸುಳಿಹೋಗಲು ತಡಬಡಿಸುವದು. ಕಟ್ಟಿದ ಕುದುರೆಯು ಗೂಟಗಳನ್ನು ಕಿತ್ತುಕೊಂಡು ಪಲಾಯನಮಾಡುವಂತೆ ಜೀವವು ಪಂಚಪ್ರಾಣಗಳನ್ನು ಸೆಳೆದುಕೊಂಡು ಪಾರಾಗುವದು. ಪಾರ್ವತಿಬಾಯಿಯು ತನ್ನ ಅವಸಾನಕಾಲದಲ್ಲಿ ದೀರ್ಘವಾಗಿ ಉಸಿರನ್ನು ಬಿಟ್ಟಳು. ಜೀವವು ತೊಲಗಿ ಹೋಯಿತು. ಬೆಳಕು ಅಡಗಿದಮೇಲೆ ಕತ್ತಲೆಯು ಕವಿಯುವಂತೆ ಅಂದವಾದ ಮನೆಯು ಸ್ಮಶಾನದ ಹಾಳು ಬೀಳಿನ ಆಕಾರವನ್ನು ಹೊಂದಿತು. ಮರಣದಿಂದ ಕಾಯವು ಮಣ್ಣುಪಾಲಾಗುವದು, ಪಂಚಭೂತಗಳೊಡನೆ ಬೆರೆಯುವದು; ಸತ್ಕೀರ್ತಿಯೊಂದೇ ಉಳಿಯುವದು. ಅವಳು ಮಾಡಿದ ಧರ್ಮಕಾರ್ಯವು ಅವಳ ಹೆಸರನ್ನು ಶಾಶ್ವತವಾಗಿ ನಿಲ್ಲಿಸಿತು. ಅವಳ ಸ್ಮಶಾನಯಾತ್ರೆಯು ಜರುಗಿತು. ಮರುದಿನ ದುರಂಧರನು ಮನೆಗೆ ಬಂದನು. ತಾಯಿಯ ಮರಣವನ್ನು ಅರಿತುಕೊಂಡನು. ಆದರೇನು, ದಾರಿತಪ್ಪಿದವನಿಗೆ ಊರೇನು, ಅಡವಿಯೇನು? ಎರಡೂ ಸಮ. ಅವನಿಗೆ ಏನೂ ಖೇದವೆನಿಸಲಿಲ್ಲ. ಕಠಿಣ ಹೃದಯಿಗಳಿಗೆ ಕಾರುಣ್ಯವೆಲ್ಲಿಯದು!

ಪಾರ್ವತಿಬಾಯಿಯು ಇರುವವರೆಗೆ ಮನೆತನದ ಭಾರವನ್ನು ಸಾಗಿಸುತ್ತಿದ್ದಳು. ಅವಳ ಮರಣದನಂತರ ಮನೆಯ ವ್ಯವಸ್ಥೆ ಕೆಟ್ಟು ಹೋಯಿತು. ಆಳುಗಳ ಕೈಯ್ಯಲ್ಲಿ ಆಡಳಿತೆಯು ಬಂದಿತು. ಆಳುಗಳು ಕೈಗೆಸಿಕ್ಕ ಸಾಮಾನುಗಳನ್ನು ಎತ್ತಿಹಾಕಹತ್ತಿದರು. ಬೆಳ್ಳಿ ಬಂಗಾರದ

ತಾಟುಗಳು, ಅಡಿಗೆಯ ಪಾತ್ರೆಗಳು, ರೇಸ್ಮೆಯ ಪೀತಾಂಬರಗಳು, ಮೇಜು, ಖುರ್ಚಿ ಮುಂತಾದ ಸಾವಾನುಗಳು ಆಳುಗಳಿಂದ ಅಪಹರಿಸಲ್ಪಟ್ಟವು. ಚಿತ್ರಪಟಗಳಿಂದ, ನಿಲುಗನ್ನಡಿಗಳಿಂದ ಶೋಭಿಸಿದ ಗೋಡೆಗಳು ಬರಿದಾಗಿ ಬಣ ಬಣ ಕಾಣಹತ್ತಿದವು. ವೈಭವಯುಕ್ತವಾದ ಮಂದಿರವು ಎಣ್ಣೆತೀರಿದ ದೀಪದಂತೆ, ನೆರಳಿಲ್ಲದ ಮರದಂತೆ, ನೀರು ಬತ್ತಿದ ಕೆರೆಯಂತೆ, ಹಂಸ, ಕಮಲಗಳಿಲ್ಲದ ಕಾಸಾರದಂತೆ, ಜನರಿಲ್ಲದ ಹಾಳೂರಿನಂತೆ, ಚಂದ್ರನಿಲ್ಲದ ಆಕಾಶದಂತೆ, ಅರಸನಿಲ್ಲದ ಅರಮನೆಯಂತೆ, ತಾಯಿಯಿಲ್ಲದ ಕೂಸಿನಂತೆ, ಪತಿಯಿಲ್ಲದ ಸತಿಯಂತೆ ಭಾಗ್ಯಹೀನವಾಗಿಯೂ, ಕಳಾರಹಿತವಾಗಿಯೂ ಕಾಣತೊಡಗಿತು. ಮಂದಿರದ ಮುಂದಿನ ಅಂದವಾದ ತೋಟವು ಸುಡುಗಾಡಿನಂತೆ ಒಣಗಿದ ವೃಕ್ಷಗಳಿಂದ ಅಸಹ್ಯವಾದ ಆಕಾರವನ್ನು ತಾಳಿತು. ದುರಂಧರನು ದುರ್ವ್ಯಸನಗಳ ಪರಿಣಾಮದಿಂದ ದೇಹಾರೋಗ್ಯವನ್ನು ಕಳೆದುಕೊಂಡು ಅಶಕ್ತನಾದನು. ತಾಯಿಯು ಮರಣಹೊಂದಿದನಂತರವೂ ಅವನು ಮನೆವಾರುಗಳ ವ್ಯವಸ್ಥೆಯಕಡೆಗೆ ಲಕ್ಷವನ್ನು ಹಾಕಲಿಲ್ಲ.

ದುರಂಧರನ ಮನಸ್ಸು ದುಷ್ಟ ವಿಚಾರಗಳ ಕಡೆಗೆ ಪ್ರವೃತ್ತಿಯುಳ್ಳದ್ದಾಯಿತೆ ಹೊರತು ಸದ್ವೃತ್ತಿಯ ಕಡೆಗೆ ತಿರುಗಲಿಲ್ಲ. ಸ್ತ್ರೀವ್ಯಾಮೋಹವಂತೂ ಅವನಲ್ಲಿ ಅಧಿಕವಾಗುತ್ತಲೆ ನಡೆಯಿತು. ಪರನಾರಿಗೆ ಆಶೆಮಾಡಿದವನು ಯಾವನು ನಾಶವಾಗದೆ ಉಳಿದಿರುವನು? ಅವನು ಈಗ ಇಂಥದೊಂದು ಅಸಂಗತ ಕೆಲಸಕ್ಕೆ ಕೈಹಾಕಿದನು. ಪುಣೆಯಲ್ಲಿ ವಿಠಲದಾಸನೆಂಬ ಕೋಟ್ಯಾಧೀಶನಾದ ವರ್ತಕನಿದ್ದನು. ಅವನ ಅಂಗಡಿಗಳು ಮುಂಬಯಿ, ಮದ್ರಾಸ, ಕಲಕತ್ತಾ ಪಟ್ಟಣಗಳಲ್ಲಿ ಹಾಗು ವಿದೇಶಗಳಾದ ಆಫ್ರಿಕಾದ ದರ್ಬಾನ ಪಟ್ಟಣದಲ್ಲಿ ಹಾಗು ಇಂಗ್ಲಂಡದ ಲಂಡನ್ ಪಟ್ಟಣದಲ್ಲಿ ಅವನ ಅಂಗಡಿಯ ಶಾಖೆಗಳಿದ್ದವು. ವ್ಯಾಪಾರದಲ್ಲಿ ಅವನು ಬಹಳ ನುರಿತವನು. ಪರದೇಶದ ಪೇಟೆಗಳಲ್ಲಿಯ ವಸ್ತುಗಳ ಬೆಲೆಯ ದರಗಳನ್ನು ದಿನಾಲು ತಂತಿಯಿಂದ ತಿಳಿದುಕೊಳ್ಳುತ್ತಿದ್ದನು. ಬೆಳ್ಳಿ, ಬಂಗಾರ, ಮುತ್ತು, ವಜ್ರದ ಹರಳುಗಳ ವ್ಯಾಪಾರದಲ್ಲಿಯೇ ಬಹು ಭಾಗ ಹಣಗಳಿಸಿದ್ದನು. ಅವನು ಒಬ್ಬ

ರಾಜ ಪುತ್ರನ ವೈಭವವನ್ನು ಅನುಭವಿಸುತ್ತಿದ್ದನು. ಅವನಿಗೆ ಮಾಧುರಿಯೆಂಬ ಮಗಳಿದ್ದಳು. ಶ್ರೀಮಂತನ ಮಗಳಾದುದರಿಂದ ಸುಖದಿಂದ ಬೆಳೆದಿದ್ದಳು. ಮನೆತನದ ಸಂಸ್ಕಾರಕ್ಕೆ ಸರಿಯಾಗಿ ವಿದ್ಯೆಯನ್ನು ಸಹ ಕಲಿತಿದ್ದಳು. ಅವಳು ಹದಿನೆಂಟನೆಯ ವಯಸ್ಸಿನಲ್ಲಿ ಇಂಟರಮಿೂಡಿಯಟ್ ವರ್ಗದಲ್ಲಿದ್ದಳು. ಅವಳು ಅಪ್ರತಿಮ ಸುಂದರಿಯೂ ಆಗಿದ್ದಳು. ಕಾಲೇಜಿಗೆ ಬರುವಾಗ, ಮನೆಗೆ ಹೋಗುವಾಗ ಮೋಟರಿನಲ್ಲಿ ಪ್ರವಾಸ ಮಾಡುತ್ತಿದ್ದಳು. ಅವಳ ಸ್ವಭಾವವು ಬಹು ಮೃದುವಾದದ್ದು, ಸರಳವಾದದ್ದು. ಆದರೆ ಜನರ ಕಪಟತನವನ್ನು ಕಂಡು ಹಿಡಿಯುವಷ್ಟು ಜಾಣತನ ಅಥವಾ ದೀರ್ಘ ದೃಷ್ಟಿಯು ಅವಳಲ್ಲಿರಲಿಲ್ಲ.

ಅವಳ ಉಡುಪು ತೊಡುಪುಗಳಲ್ಲಿ ಶ್ರೀಮಂತಿಕೆಯ ವೈಭವವು ಹೊರಸೂಸುತ್ತಿತ್ತು. ಕಿವಿಯಲ್ಲಿ ವಜ್ರದ ಬೆಂಡವಾಲೆಗಳು ಕೋಲು ಮಿಂಚಿನಂತೆ ಚಮಕಾಯಿಸುತ್ತಿದ್ದವು. ಕಂಠದಲ್ಲಿ ಮೂರೆಳೆಯ ಮುತ್ತಿನ ಹಾರವು ಮರವನ್ನು ಆಶ್ರಯಿಸಿದ ಮಲ್ಲಿಗೆಯ ಲತೆಯಂತೆ ಶೋಭಿಸುತ್ತಿತ್ತು. ಮುತ್ತು, ರತ್ನಗಳಿಂದ ಕಟ್ಟಿದ ಕೈಬಳೆಗಳು ಮುಗಿಲಲ್ಲಿ ಮೂಡಿದ ಕಾಮನಬಿಲ್ಲಿನ ಕಾಂತಿಯನ್ನು ಕಡೆಗಾಣಿಸುತ್ತಿದ್ದವು. ಮೈಯಲ್ಲಿ ಜರತಾರಿಯ ಕೆಂಪು ಬಣ್ಣದ ಕುಪ್ಪಸ, ರೇಸಿಮೆಯ ಜರದಂಚಿನ ಗುಲಾಬಿವರ್ಣದ ಪೀತಾಂಬರಗಳು ಅವಳ ಬಿಳಿಯ ಮೈಬಣ್ಣಕ್ಕೆ ಒಪ್ಪಹಾಕಿದಂತೆ ಕಣ್ಮನಗಳಿಗೆ ಆಕರ್ಷಕವಾಗಿದ್ದವು ದೇಹಾಕಾರವು ತೆಳ್ಳಗಾದರೂ ಸುಖದಿಂದ ಬೆಳೆದವಳಾದುದರಿಂದ ಗಲ್ಲಗಳು ಮಾಗಿದ ಮಾವಿನ ಹಣ್ಣುಗಳಂತೆ ಹರೆಯದ, ಆರೋಗ್ಯದ ಮತ್ತು ಸುಖ ಜೀವನದ ಸುಚಿನ್ಹವನ್ನು ವ್ಯಕ್ತಗೊಳಿಸುತ್ತಿದ್ದವು. ಮೃದುವಾದ ತುಟಿಗಳನ್ನು ತೆರೆದಾಗ ಅವಳ ಹಲ್ಲುಗಳ ಕಾಂತಿಯು ಶಿಂಪುಗಳಿಂದ ಹೊರಬೀಳುವ ಮುತ್ತುಗಳಂತೆ ಪ್ರಕಾಶಿಸುತ್ತಿತ್ತು. ನಗೆ ಮುಖವು ಅವಳಿಗೆ ಸ್ವಾಭಾವಿಕವಾಗಿತ್ತು. ಅವಳ ಸರಳವಾದ ಮೂಗು ಸಂಪಿಗೆಯ ಹೂವೆಂದು ಭಾಸವಾಗುತ್ತಿತ್ತು ಅವಳ ಕಣ್ಣುಗಳು ಕಮಲಗಳನ್ನು ತಿರಸ್ಕರಿಸುವಂತಿದ್ದವು. ಹುಬ್ಬುಗಳು ಕಾಮನ ಕೈಯೊಳಗಿನ ಬಿಲ್ಲಿ

ಗಳನ್ನು ಹೀಯಾಳಿಸುವಂತಿದ್ದವು. ಅವಳು ಹಣೆಯಲ್ಲಿಟ್ಟುಕೊಂಡ ಕುಂಕುಮ ತಿಲಕವು ಸಂಧ್ಯಾಕಾಲದ ಸೂರ್ಯನಂತೆ ಕಾಣುತ್ತಿತ್ತು. ಅವಳ ವಿಶಾಲವಾದ ಹಣೆಯು ಪಶ್ಚಿಮ ದಿಕ್ಕಿನ ಪರ್ವತವನ್ನೂ ತಲೆಯಲ್ಲಿಯ ಕಪ್ಪಾದ ಕೂದಲುಗಳು ಸಾಗರದ ಜಲವನ್ನೂ ಹೋಲುತ್ತಿದ್ದವು. ಅವಳ ರೂಪಕ್ಕೆ ತಾನು ಅನುಗುಣವಾದ ಆಭರಣವಲ್ಲವೆಂದು ಭಾವಿಸಿ ಕುಂಕುಮ ತಿಲಕವೆಂಬ ಸೂರ್ಯನು ಅವಳ ಕೇಶವೆಂಬ ಸಾಗರದಲ್ಲಿ ಮುಳುಗುವಂತೆ ಬೈತಲೆಯ ಬಾಗಿಲ ಸಮೀಪದಲ್ಲಿ ಬಂದು ನಿಂತಂತೆ ಕಾಣುತ್ತಿತ್ತು.

ಮುಳಾ ನದಿಯ ದಂಡೆಯಲ್ಲಿ ಒಂದು ಉಪವನವುಂಟು. ಅದು ಬಂಡಗಾರ್ಡನ್ ಎಂದು ಕರೆಯಲ್ಪಡುವದು. ಅದರಲ್ಲಿ ನಾನಾ ಬಗೆಯ ಪುಷ್ಪ ವೃಕ್ಷಗಳೂ, ಬಳ್ಳಿಗಳೂ, ಅಶೋಕ, ಸಂಪಿಗೆ ಮೊದಲಾದ ಭವ್ಯವಾದ ಮರಗಳೂ ಅಲ್ಲಲ್ಲಿ ಕ್ರಮದಿಂದ ಹಚ್ಚಲ್ಪಟ್ಟಿರುವವು. ನೀರಿನ ಕಾರಂಜಿಗಳು ನಿತ್ಯದಲ್ಲಿ ನೀರನ್ನು ಪುಟಿಸುತ್ತಿರುವವು. ಕೋಗಿಲೆಗಳು ಮಧುರ ಧ್ವನಿಯಿಂದ ವಿಶ್ರಾಂತಿ ಪಡೆಯಲು ಬಂದವರಿಗೆ ಆನಂದವನ್ನುಂಟು ಮಾಡುವವು. ಗಿಡಗಳ ನೆರಳಿನಲ್ಲಿ ಸಂಗಮರಿ ಕಲ್ಲುಗಳ ಆಸನಗಳು ಅಲ್ಲಲ್ಲಿ ನಿಲ್ಲಿಸಲ್ಪಟ್ಟಿರುವವು. ವಿರಾಮಕ್ಕಾಗಿ ಬಂದ ಜನರು ಅವುಗಳ ಮೇಲೆ ಕುಳಿತು ತಾಸೆರಡು ತಾಸುಗಳ ವರೆಗೆ ತಮ್ಮ ಶ್ರಮಪರಿಹರಿಸಿಕೊಳ್ಳುವರು. ಒಂದು ದಿನ ಸಂಧ್ಯಾಕಾಲದಲ್ಲಿ ಮಾಧುರಿಯು ತನ್ನ ದಾಸಿಯರೊಂದಿಗೆ ಆ ಉಪವನಕ್ಕೆ ಬಂದಿದ್ದಳು. ಅದೇ ಕಾಲಕ್ಕೆ ದುರಂಧರನು ತನ್ನ ಪರಮ ಸ್ನೇಹಿತನಾದ ಕಮಾಲನ ಸಂಗಡ ಆ ತೋಟಕ್ಕೆ ಬಂದನು. ದುರಂಧರನ ನೋಟವು ಮಾಧುರಿಯ ಕಡೆಗೆ ಬಿದ್ದಿತು. ಅವಳ ತಾರುಣ್ಯ, ಸೌಂದರ್ಯ, ಬೆಡಗು, ಉಡಿಗೆಯ ನವೀನತೆ, ಆಭರಣಗಳ ಮನೋಹರತೆಗಳು ಅವನ ಮನಸ್ಸಿನಲ್ಲಿ ಆಳವಾಗಿ ಮೂಡಿದವು. ಅವನು ಮಾಧುರಿಯು ಕುಳಿತ ಎದುರಿನ ಆಸನದಲ್ಲಿ ಬಂದು ಕುಳಿತನು. ಅವಳು ಸಹಜವಾದ ಮುಗುಳುನಗೆಯ ಮುಖಮುದ್ರೆಯವಳಾದುದರಿಂದ ದುರಂಧರನು ಅವಳು ತನ್ನನ್ನು ನೋಡಿ ಪ್ರೇಮ ವ್ಯಕ್ತಮಾಡುವಳೆಂದು ಭಾವಿಸಿದನು.

ಕಾಮಮೋಹಿತರಾದವರಿಗೆ ಮಿಥ್ಯಾಭಾವನೆಯುಂಟಾಗುವದು ಸಹಜವು. ದುರಂಧರನ ದುಷ್ಟದೃಷ್ಟಿಯ ಇಂಗಿತವು ಅವಳಿಗೆ ಅರಿಕೆಯಾಗಲಿಲ್ಲ. ಮುಗ್ಧಭಾವವುಳ್ಳವರಿಗೆ ಜಗತ್ತೆಲ್ಲವೂ ಕಲಂಕವಿಲ್ಲದಂತೆ ತೋರುವದು.

ಮಾಧುರಿಯು ಕೆಲಹೊತ್ತು ವಿರಾಮ ಪಡೆದನಂತರ ಮೋಟರಿನಲ್ಲಿ ಕುಳಿತು ಮನೆಗೆ ಹೊರಟಳು. ಅದೇವೇಳೆಗೆ ದುರಂಧರನು ಕಮಾಲನೊಂದಿಗೆ ತನ್ನ ಮೋಟರ ಗಾಡಿಯನ್ನು ತಿರುವಿಗೊಂಡು ಮಾಧುರಿಯ ಮೋಟರನ್ನು ಹಿಂಬಾಲಿಸಿದನು. ಮಾಧುರಿಯು ಮಂದಿರದೊಳಗೆ ಪ್ರವೇಶಮಾಡಿದಳು ದುರಂಧರನು ಅವಳ ಮಂದಿರದ ಮಹಾದ್ವಾರದಲ್ಲಿ ಗಾಡಿಯನ್ನು ನಿಲ್ಲಿಸಿದನು. ಆದರೇನು ಅವನ ನಿರಾಶೆಗೆ ಪಾರವೇ ಇಲ್ಲದಾಯಿತು. ಮಾಧುರಿಯ ಮುಖವು ಕಿಡಿಕಿಯೊಳಗಿಂದಲು ಸಹ ಕಾಣದಾಯಿತು. ಮತ್ತೊಂದು ಸಲ ಅವಳ ಮುಖವನ್ನು ನೋಡಿ ಸಮಾಧಾನಪಡೆಯಬೇಕೆಂದು ಎಷ್ಟು ಹೊತ್ತು ಕಾಯ್ದುಕೊಂಡು ನಿಂತರೂ ಅವಳ ಸುಳಿವೇ ಕಾಣಬರಲಿಲ್ಲ. ಆ ವಾರದೊಳಗೆ ಪ್ರವೇಶ ಮಾಡಬೇಕೆಂದರೆ ಬಾಗಿಲಲ್ಲಿ ಬಿಚ್ಚುಗತ್ತಿಯ ಕಾವಲುಗಾರರು ನಿಂತಿರುವರು. ಹೀಗಿರುವಾಗ ಅವನು ನಿರುಪಾಯನಾಗಿ ಹೊರಟನು. ಅಲ್ಲಿಂದ ಅವನು ತನ್ನ ವಿನೋದ ಕೂಟದ ಸ್ಥಳಕ್ಕೆ ಬಂದನು. ಅಲ್ಲಿ ಅವನಂಥ ಅನೇಕ ಜನ ಕುಡುಕರು ರೊಕ್ಕದ ಆಟದಲ್ಲಿ ತೊಡಗಿದ್ದರು. ಅವನಿಗೆ ಆಗ ಆಟನೋಟಗಳಲ್ಲಿ ಮನಸಾಗಲಿಲ್ಲ. ಮಾಧುರಿಯ ಚಿತ್ರವೇ ತಲೆಯಲ್ಲಿ ತುಂಬಿತ್ತು. ಅವನ ಮನೋಭಾವವನ್ನರಿತ ಕಮಾಲನು ಅವನ ಚಿತ್ತವನ್ನು ತಿರುಗಿಸುವ ಉದ್ದೇಶದಿಂದ ಅವನಿಗೆ ಮದ್ಯಪಾನ ಮಾಡಿಸಿದನು. ಅದರಿಂದ ದುರಂಧರನು ಮತ್ತನಾಗಿ ಎಚ್ಚರತಪ್ಪಿ ಬಡಬಡಿಸಹತ್ತಿದನು. ಕೆಲಹೊತ್ತಿನ ಮೇಲೆ ಸ್ವಲ್ಪ ಚೇತರಿಸಿಕೊಂಡು ''ಮಾಧುರಿ! ಮಾಧುರಿ! ನೀನು ಲಭಿಸಿದರೆ ನನ್ನ ಜೀವ, ಇಲ್ಲದಿದ್ದರೆ ನನ್ನ ಸಾವು'' ಎಂದು ಉಸುರಿದನು. ಕಾಮುಕರಿಗೆ ಕಾಮವಿಕಾರವಲ್ಲದೆ ಮತ್ತಾವ ವಿಚಾರವೂ ಇರುವದಿಲ್ಲ

ಕಮಾಲನು ದುರಂಧರನ ಸೇವಕನಾಗಿದ್ದುದಲ್ಲದೆ ಅವನ ಕೇವಲ ಹಿತಚಿಂತಕನಾದ ಸ್ನೇಹಿತನಾಗಿದ್ದನಷ್ಟೇ. ನೆರಳಿನಂತೆ ಅವನನ್ನು

ಯಾವಾಗಲೂ ಹಿಂಬಾಲಿಸುತ್ತಿದ್ದನು. ಮಾಧುರಿಯ ದರ್ಶನದಿಂದ ಆ ದಿನ ತನ್ನ ಒಡೆಯನಿಗುಂಟಾದ ಭ್ರಾಂತಿಯನ್ನು ಬಿಡಿಸಬೇಕೆಂಬ ಕುತೂಹಲದಿಂದ ಕಮಾಲನು ಅವನನ್ನು ಆ ದಿನದ ಚಲನಚಿತ್ರ (cinema) ನೋಡಲು ಕರೆದೊಯ್ದನು. ಚಲನಚಿತ್ರದ ಕಥಾಭಾಗವು "ಸಂಸಾರ ಯಾತ್ರೆ" ಎಂಬದಿತ್ತು. ದುರಾದೃಷ್ಟಕ್ಕೆ ಅದರಲ್ಲಿಯ ನಾಯಕನು ದುರಂಧರನಂತೆಯೇ ಓರ್ವ ಕನ್ನೆಯ ಮೇಲೆ ಪ್ರೇಮವಿಟ್ಟು ಅವಳ ಪ್ರಾಪ್ತಿಗಾಗಿ ಅನೇಕ ವಿಧದ ಕಷ್ಟಗಳನ್ನನುಭವಿಸಿದ ಸಂದರ್ಭಗಳು ಚಿತ್ರಿತವಾಗಿದ್ದವು. ಆಗರೆ ಪರಿಣಾಮದಲ್ಲಿ ಆ ಕನ್ಯೆಯ ಸಮಾಗಮಹೊಂದದೆ ವಿಫಲನಾಗಿ ಅವನು ಭ್ರಾಂತಿಯನ್ನು ಹೊಂದಿದ್ದನು. ಅವನು ಭ್ರಮೆ ಹೊಂದಿ ಬಡಬಡಿಸುವಾಗ ತಾನು ಪ್ರೇಮವಿಟ್ಟ ಕನ್ಯೆಯ ಚಿತ್ರಗಳು ಅವನ ಕಣ್ಣಮುಂದೆ ಚಕ್ರಾಕಾರವಾಗಿ ತಿರುಗಿದಂತಾಗುತ್ತಿದ್ದವು. ಆ ಚಿತ್ರಗಳನ್ನು ನೋಡಿದೊಡನೆ ಆ ತರುಣನು ಹವ್ವನೆ ಹಾರಿ ಚಿತ್ರಗಳನ್ನು ಹಿಡಿಯಲು ಪ್ರಯತ್ನಿಸುವನು. ಹಿಡಿತಕ್ಕೆ ಸಿಗದಾಗಲು ವ್ಯಥೆಪಟ್ಟು ಹಣೆಯನ್ನು ತಟ್ಟಿಕೊಳ್ಳುವನು. ಇಂಥ ಕನಿಕರವಾದ ದೃಶ್ಯವು ದುರಂಧರನಿಗೆ ಶಾಂತಿಯನ್ನುಂಟುಮಾಡುವದರಬದಲು ದೆವ್ವಬಡಿದವನಿಗೆ ಚೇಳುಕಡಿಸಿದಂತಾಯಿತು. ಅವನ ಮೋಹವಿಕಾರವು ಇಮ್ಮಡಿಯಾಯಿತು. ಆಗ ಅವನು ಕುಳಿತಆಸನದಲ್ಲಿಯೇ ಮೂರ್ಛೆಹೊಂದಿದನು.

## ಪ್ರಕರಣ ೧೧

# ಕಮಾಲನ ಕಾರಸ್ಥಾನ

ನೀತಿಮಾರ್ಗವನ್ನು ಬಿಟ್ಟ ಸ್ವೇಚ್ಛಾಚಾರಿಗಳು ತಮ್ಮ ರಾಕ್ಷಸೀ ಹೇತುವನ್ನು ಸಾಧಿಸಲು ಯಾವ ನೀಚಕೃತಿಯನ್ನೂ ಮಾಡಲು ಹಿಂಜರಿಯುವದಿಲ್ಲ. ದುರಂಧರನ ಮನೋಕಾಂಕ್ಷೆಯನ್ನರಿತ ಕಮಾಲನು ಅವನ ಬಯಕೆಯನ್ನು ಈಡೇರಿಸಲು ನಾನಾ ಬಗೆಯ ಉಪಾಯಗಳನ್ನು

ಕೈಕೊಳ್ಳಲು ಹವಣಿಸಿದನು. ಚಲನಚಿತ್ರಗೃಹದಲ್ಲಿ ಮೂರ್ಛೆಹೊಂದಿದ ದುರಂಧರನನ್ನು ಶೀತೋಪಚಾರದಿಂದ ಸಂತೈಸಿದನಂತರ ಕಮಾಲನು ಅವನನ್ನು ಮನೆಗೆ ಕರೆತಂದನು. ಮನೆಗೆ ಬಂದನಂತರವೂ ದುರಂಧರನ ಮನೋರೋಗವು ಶಾಂತವಾಗದೆ ಬೆಂಕಿಯು ಬೇಗೆಯಂತೆ ಬೆಳೆಯ ಹತ್ತಿತು. ಅವನಿಗೆ ಊಟ ಉಡಿಗೆಗಳ ಮೇಲೆ ಮನಸ್ಸೇ ಎಳಸಲಿಲ್ಲ. ಮೃದುವಾದ ಗಾದಿಗಳು ಮುಳ್ಳಿನಂತೆಯೂ, ಸವಿಯಾದ ಪಾಯಸಗಳು ಪಾಷಾಣದಂತೆಯೂ, ಬಾನುಲಿಯ ಗಾಯನವು ಗಾಯದಮೇಲೆ ಬರೆಕೊಟ್ಟಂತೆಯೂ ಭಾಸವಾಗಹತ್ತಿದವು. ಮಾಧುರಿಯ ಬಡಬಡಿಕೆಯ ಹೊರತು ಮತ್ತಾವ ಮಾತೂ ಅವನಿಗೆ ರುಚಿಸದು. ಅವನನ್ನು ಸಂತೈಸಲು ಕಮಾಲನು ಮಾಡಿದ ಯಾವ ಪ್ರಯತ್ನವೂ ಸಫಲವಾಗಲಿಲ್ಲ. ದುರಂಧರನಿಗೆ ನಿದ್ರೆ ನೀರಡಿಕೆಗಳು ಇಲ್ಲದಹಾಗಾಯಿತು. ಹಗಲು, ರಾತ್ರಿಗಳು ಒಂದೇ ವಿಧವಾಗಿ ಪರಿಣಮಿಸಿದವು. ಅವನ ಬಯಕೆಯ ಆತುರವು ಮೇರೆದಪ್ಪಿತು. ಅವನು ತನ್ನ ಭ್ರಾಂತಿಯ ಭರದಲ್ಲಿ ಕಮಾಲನನ್ನು ಕೂಗಿ, "ಕಮಾಲಾ,- ನನ್ನ ಅವಸ್ಥೆಯನ್ನು ಕಾಣದಿರುವಿಯಾ? ನನ್ನ ಹೃದಯದ ಪ್ರೇಮವಸ್ತುವು ದೊರೆಯದಿದ್ದರೆ ನನ್ನ ಪಂಚ ಪ್ರಾಣಗಳುಕಾಲ್ದೆಗೆಯುವವು. ಜೀವವು ದೇಹದಿಂದ ನುಸುಳಿಹೋಗುವದು. ಮಾಧುರಿಯ ರೂಪ, ಲಾವಣ್ಯಗಳ ಚಿತ್ರಪಟವು ನನ್ನ ಕಣ್ಣುಮುಂದೆ ಕಟ್ಟಿದಂತಿರುವದು. ಅವಳ ಮುಖಕಮಲವು ಚಂದ್ರನ ಕಳೆಯನ್ನು ಹೀಯಾಳಿಸುವದು, ಮಧುರವಾದ ಮುಗುಳುನಗೆಯು ಪಾರಿಜಾತ ಪುಷ್ಪವನ್ನು ಹುರುಡಿಸುವದು; ಅವಳ ನಡಿಗೆಯು ಹಂಸಗಳ ಚಲನೆಯನ್ನು ನಾಚಿಸುವದು; ಅವಳ ಸವಿನುಡಿಯ ಸ್ವರವು ಕೋಗಿಲೆಯ ಕಂಠವನ್ನು ಕುಗ್ಗಿಸುವದು; ವೀಣೆಯ ವಿವಿಧ ನಾದಗಳ ಮಂಜುಳ ಧ್ವನಿಯನ್ನು ಮೀರಿಸುವದು. ಜಲತರಂಗವಾದ್ಯದ ಇಂಪಿನ ಸೊಂಪನ್ನು ಸೋಲಿಸುವದು; ಆರಗಿಳಿಯ ಮುದ್ದು ಮಾತುಗಳ ಸದ್ದನ್ನಡಗಿಸುವದು. ಅವಳು ತನ್ನ ದಾಸಿಯರಕಡೆಗೆ ಹೊರಳಿಸಿದ ದಯಾದೃಷ್ಟಿಯ ಕಿರಣಗಳು ನಿಧಾನವಾಗಿ ಸುರಿಯುವ ಮಳೆಯ ಬಿಂದುಗಳಂತೆ ಕಾಣುವವು. ಅವಳು ಆಡಿದ ಒಂದೊಂದು ಮಾತು ಮುತ್ತಿನಂತೆ ಮಿರುಗುವದು. ಅವಳು

ಪರಪುರುಷರಿಂದ ಮರೆಮಾಡಿಕೊಳ್ಳಲು ಮುಖವನ್ನು ತಿರುವಿದಾಗ ಸೌಜನ್ಯದ ಸಾರವು ಮಿಂಚಿನಂತೆ ಮಿನುಗುವದು.

ಅವಳು ಉದ್ಯಾನದ ಆಸನದಲ್ಲಿ ಕುಳಿತುಕೊಂಡಾಗ ಕೈಯ್ಯಲ್ಲಿ 'ಜೀವಿತ ಸಾಫಲ್ಯ' ಎಂಬ ಹೊತ್ತಿಗೆಯನ್ನು ಹಿಡಿದುಕೊಂಡು ಕೆಲಹೊತ್ತು ಓದುತ್ತ ಕುಳಿತಿದ್ದಳು. ಅವಳಲ್ಲಿದ್ದ ಸಾಹಿತ್ಯ ಪ್ರೇಮವು ಆದರಿಂದ ವ್ಯಕ್ತವಾಗುತ್ತಿದ್ದುದಲ್ಲದೆ ಆಗ ಅವಳು ವಿದ್ಯಾಧಿದೇವತೆಯಾದ ಸರಸ್ವತಿಯಂತೆ ಶೋಭಿಸುತ್ತಿದ್ದಳು. ಉದ್ಯಾನದಲ್ಲಿ ಅಲೆದಾಡುವ ಅನಾಥ ಭಿಕ್ಷುಕರಿಗೆ, ಪಶು, ಪಕ್ಷಿಗಳಿಗೆ ಅವಳು ದಯೆಯಿಂದ ದಾನ ಮಾಡಿದ ಹಣಕಾಸು, ಹಣ್ಣುಹಂಪಲಗಳಿಂದ ಅವಳು ದಯಾನಿಧಿಯಾದ ಪಾರ್ವತಿಯ ಅವತಾರವೋ ಎಂಬಂತೆ ಭಾಸವಾದಳು. ಅವಳು ತನ್ನ ಉಡಿಗೆತೊಡಿಗೆಗಳ ವೈಭವದ ಬೆಡಗಿನಿಂದ ಶೇಷಶಾಹಿಯಾದ ವಿಷ್ಣುವಿನ ಅರ್ಧಾಂಗಿಯಾದ ಲಕ್ಷ್ಮಿಯಂತೆ ಪ್ರಕಾಶಿಸಿದಳು. ಬಹಳ ಹೇಳುವದೇನು, ಅವಳು ಸದ್ಗುಣದ, ಸೌಜನ್ಯದ, ಸದಾಚಾರದ, ಸುಸಂಸ್ಕೃತಿಯ, ವಿನಯದ, ಸವಿಚಾರದ, ಮತ್ತು ಸೌಂದರ್ಯದ ಸಾರಸರ್ವಸ್ವವಾಗಿರುವಳು. ಕಮಾಲಾ! ಅವಳನ್ನು ಅರ್ಧಾಂಗಿಯನ್ನಾಗಿ ಪಡೆದವನು ಸುದೈವಿಯಲ್ಲವೇ? ಅವನ ಜನ್ಮವು ಸಾರ್ಥಕವಲ್ಲವೇ? ಅವಳು ದೊರಕುವ ವರೆಗೆ ಒಂದು ಕ್ಷಣವು ಒಂದು ದಿನದಂತೆ ತೋರುವದು. ಅವಳು ಲಭಿಸದಿದ್ದಲ್ಲಿ ನನ್ನ ಪ್ರಾಣವು ಉಳಿಯದು. ಕಮಾಲಾ! ಕಮಾಲಾ!! ನಿನ್ನ ಹೊರತು ನನಗೆ ಹಿತಚಿಂತಕರು ಯಾರಿರುವರು? ನಿನಗೆ ಸರಿಯಾದ ಕಾರ್ಯದಕ್ಷರು ಮತ್ತಾರಿರುವರು? ನೀನೇ ಈ ಕಾರ್ಯವನ್ನು ಸಾಧ್ಯಗೊಳಿಸಬೇಕು." ಹೀಗೆಂದು ಹೇಳಿ ದುರಂಧರನು ಮೋಹವಶದಿಂದ ಮೂರ್ಛಿತನಾದನು.

ದುರಂಧರನ ದುರವಸ್ಥೆಯನ್ನು ಕಂಡು ಕಮಾಲನು ಮನದಲ್ಲಿ ಮರುಗಿದನು. ಆದರೆ ಆ ಕಾರ್ಯ ಸಾಧನವು ಸಾಧಾರಣವಾದುದಾಗಿರಲಿಲ್ಲ. ಮಾಧುರಿಯು ಕೋಟ್ಯಾಧೀಶನಮಗಳು. ದುರಂಧರನು ಹುಟ್ಟು ಶ್ರೀಮಂತನಾದರೂ ದುರ್ವ್ಯಸನಗಳಿಗಾಗಿ ಮುಕ್ಕಾಲು ಭಾಗ ಆಸ್ತಿಯನ್ನು

ಮಾರಿಬಿಟ್ಟಿದ್ದನು, ಇದರ ಮೇಲೂ ದುರ್ವ್ಯಸನಿಯೂ, ದುರಾಚಾರಿಯೂ ಎಂದು ಎಲ್ಲರಿಗೂ ಗೊತ್ತಾದವನಿದ್ದನು. ಇಂಥ ಪರಿಸ್ಥಿತಿಯಲ್ಲಿ ಕೋಟ್ಯಾಧೀಶನಾದ ವಿಠ್ಠಲದಾಸನು ತನ್ನ ಪ್ರಿಯ ಪುತ್ರಿಯನ್ನು ದುರಂಧರನಿಗೆ ಕೊಡಲು ಸಮ್ಮತಿಸುವದಾದರೂ ಅಸಂಭವವು. ಇವೆಲ್ಲ ವಿಚಾರಗಳು ಕಮಾಲನ ತಲೆಯಲ್ಲಿ ಅಲೆದಾಡಹತ್ತಲು ಅವನು ದುರಂಧರನಿಗೆ ತಿಳುವಳಿಕೆ ಹೇಳಿ ಆ ಹುಚ್ಚನ್ನು ಬಿಡಿಸಬೇಕೆಂದು ಆಲೋಚಿಸಿದನು. ದುರಂಧರನು ಚೇತರಿಸಿಕೊಂಡ ಮೇಲೆ ಕಮಾಲನು ಹೇಳಿದ್ದೇನೆಂದರೆ,- "ಒಡೆಯಾ! ನನ್ನ ಹಿತವಚನವನ್ನಷ್ಟು ದಯವಿಟ್ಟು ಕೇಳುವಿಯಾ? ಜಗತ್ತಿನಲ್ಲಿ ಜನರು ವ್ಯವಹಾರ ಮಾಡುವಾಗ ಬೇರೆಯವರ ಆಚಾರ, ವಿಚಾರಗಳನ್ನು ಶೋಧಿಸಿ ನೋಡುವರು. ಹಣ ಸಾಲ ಕೊಡುವಾಗ ಸಾಲಗಾರನ ಪ್ರಾಮಾಣಿಕತನ ಹಾಗು ಅವನ ಆಸ್ತಿಯ ಭದ್ರತೆಗಳ ಕಡೆಗೆ ಲಕ್ಷವಿಡುವರು. ಮಾತುಕತೆಗಳನ್ನಾಡುವಾಗ ಸಹ ತಮಗೆ ವಿದ್ಯೆಯಲ್ಲಿ, ವಯಸ್ಸಿನಲ್ಲಿ, ಸಾಮಾಜಿಕಸಮತ್ವದಲ್ಲಿ ಸರಿಯಾಗಿದ್ದವರ ಸಂಗಡ ಸಲಿಗೆಯಿಂದ ವರ್ತಿಸುವರು, ರಕ್ತ ಸಂಬಂಧವನ್ನು ಬೆಳೆಯಿಸುವರು. ಆಚಾರ, ವಿಚಾರಗಳಲ್ಲಿ ಅವನತಿಯನ್ನು ಹೊಂದಿದವರೊಡನೆ ಸಂಬಂಧ ಬೆಳೆಸಲು ಜನರು ಹಿಂಜರಿಯುವರು. ಈಗ ನೀನು ಬಯಸಿದ ವಸ್ತುವು ಸುಲಭ ಸಾಧ್ಯವೆಂದು ನನಗೆ ತೋರುವದಿಲ್ಲ. ವಿಠ್ಠಲದಾಸನಾಗಲಿ ಅಥವಾ ಅವನ ಮಗಳಾಗಲಿ ನಿನ್ನ ವಿಚಾರಕ್ಕೆ ಒಪ್ಪಲಾರರು"

ಈ ಮಾತುಗಳನ್ನು ಕೇಳಿದ ದುರಂಧರನಿಗೆ ಎದೆಗೆ ಕಲ್ಲು ತಾಗಿದಂತಾಗಿ, "ಏನು? ನಾನೂ ಒಬ್ಬ ಜಹಾಗಿರದಾರನಲ್ಲವೇ? ಶ್ರೀಮಂತನಲ್ಲವೇ? ತರುಣನಲ್ಲವೇ? ಸುಂದರನಲ್ಲವೇ? ಮಾಧುರಿಗೆ ಸರಿಯಾದ ವರನಲ್ಲವೇ? ನೀನು ಈ ಸಂಬಂಧವಾಗಿ ವಿಠ್ಠಲದಾಸನಿಗೂ ಅವನ ಮಗಳಿಗೂ ಸ್ವತಃ ಸೂಚನೆಯನ್ನು ಮಾಡು. ಅವರು ಅದಕ್ಕೆ ಒಪ್ಪಿದರೆ ಒಳಿತು, ಇಲ್ಲದಿದ್ದರೆ ಯಾವ ಯುಕ್ತಿ, ಅಥವಾ ಬಲಾತ್ಕಾರದ ಕೃತಿಗಳಿಂದಾದರೂ ಮಾಧುರಿಯನ್ನು ವಶವಡಿಸಿಕೊಳ್ಳಲೇ ಬೇಕು." ಎಂದು ದರ್ಪದ ಮಾತನ್ನಾಡಿದನು. ಕಮಾಲನು ಕುಹಕಬುದ್ಧಿಯವನಾಗಿದ್ದರೂ ಕಾರಸ್ಥಾನದಲ್ಲಿ ಕುಶಲನಾಗಿದ್ದರೂ ಅತ್ಯಾಚಾರಗಳಿಂ

ದಾಗುವ ಪರಿಣಾಮುಗಳನ್ನು ಅರಿತವನಾಗಿದ್ದನು. ದುರಂಧರನ ಮನೆಯಲ್ಲಿ ಸೇವೆಗೆ ಸೇರುವ ಮೊದಲು ಅವನು ಬಡತನದ ಬಾಳನ್ನು ಅನುಭವಿಸಿದ್ದನು. ದೇಹಶ್ರಮದಿಂದ ಕೈಕೂಲಿ ಮಾಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದನು. ಕೆಲವು ಸಾರೆ ದುಡ್ಡಿನ ಆಶೆಗಾಗಿ ಕಳವು ಮಾಡಿ ಲತ್ತೀಪೆಟ್ಟುಗಳನ್ನು ತಿಂದಿದ್ದನು, ಕೆಲವು ವೇಳೆ ಸೆರೆಮನೆಯ ಅತಿಥಿಯೂ ಆಗಿದ್ದನು. ಆದುದರಿಂದ ಅವನು ದುರಂಧರನ ವಿಚಾರಕ್ಕೆ ಒಮ್ಮೆಲೇ ಅನುಮತಿಯನ್ನು ಕೊಡದೆ ವಿಠ್ಠಲದಾಸನಿಗೆ ವಿನಯದ ಸೂಚನೆಯನ್ನು ಮಾಡಲು ನಿರ್ಧರಿಸಿದನು. ಅವನು ಆ ದಿನ ಸಂಜೆಗೆ ವಿಠ್ಠಲದಾಸನ ಮನೆಗೆ ಹೋಗಿ ದುರಂಧರನ ವಿಷಯವಾಗಿ ಪ್ರಸ್ತಾಪವನ್ನೆತ್ತಿದನು. ವಿಠ್ಠಲದಾಸನು ದುರಂಧರನ ಚರಿತ್ರೆಯೆಲ್ಲವನ್ನು ಅರಿತವನಾದುದರಿಂದ ಆ ಸೂಚನೆಯನ್ನು ನಿರಾಕರಿಸಿದನು.

ಕಮಾಲನು ನಿರಾಶನಾಗಿ ಹೊರಟನು. ಅವನು ತಿರುಗಿ ಬಂದಾಗ ಅವನ ಪ್ರಯತ್ನವು ವಿಫಲವಾದುದನ್ನು ಕೇಳಿ ದುರಂಧರನ ಚಿತ್ತವು ಕದಲಿತು. ಆಗ ಅವನು ಕಮಾಲನನ್ನು ಕುರಿತು, "ಹಾಗಾದರೆ ಮಾಧುರಿಯ ಮನಸ್ಸನ್ನೇ ತಿರುಗಿಸಲು ಹಂಚಿಕೆಮಾಡು" ಎಂದು ಹೇಳಿದನು. ಕಮಾಲನಾದರೋ ಕುಯುಕ್ತಿಗಳಲ್ಲಿ ಪಾರಂಗತನು. ತರುಣಿಯರ ಮನಸ್ಸನ್ನು ಒಲಿಸುವುದರಲ್ಲಿ ಚತುರಳಾದ ಒಬ್ಬ ಮುದುಕಿಯಿದ್ದಳು. ಕಮಾಲನು ಅವಳನ್ನು ಗೊತ್ತುಹಚ್ಚಿ ಅವಳಿಗೆ ಕೊರವಂಜಿ ವೇಷ ಧರಿಸಿ ವಿಠ್ಠಲದಾಸನು ಮನೆಯಲ್ಲಿಲ್ಲದ ವೇಳೆಯಲ್ಲಿ ಅವಳನ್ನು ಕರೆದುಕೊಂಡು ಹೋದನು. ಮಾಧುರಿಯು ತನ್ನ ಪ್ರತ್ಯೇಕವಾದ ಕೋಣೆಯಲ್ಲಿ ಓದುತ್ತ ಕುಳಿತಿದ್ದಳು. ಕೊರವಂಜಿಯು ಮಧುರಧ್ವನಿಯಿಂದ ಪದವನ್ನು ಹೇಳುತ್ತ ಬರುವಾಗ ಕಮಾಲನು ಸಾರಂಗಿಯನ್ನು ಬಾರಿಸುತ್ತಿದ್ದನು. ಅವರೀರ್ವರೂ ಮಾಧುರಿಯ ಕೋಣೆಯ ಬಾಗಿಲಿಗೆ ಬಂದರು. ಮಾಧುರಿಯು ಹಾಡು ಕೇಳಲು ಉತ್ಸಾಹ ತೋರಿಸಿದ್ದರಿಂದ ಕೊರವಂಜಿಯು ವಧುವರರ ಪ್ರೇಮದ ಹಾಡುಗಳನ್ನು ಹೇಳಿದಳು. ಆ ಮೇಲೆ ಕೊರವಂಜಿಯು ಅವಳ ಮನಸ್ಸನ್ನು ಒಲಿಸಲು 'ನುಟ' ಭವಿಷ್ಯ ಹೇಳಲು ಪ್ರಾರಂಭಿಸಿದಳು. "ಅವ್ವಾ, ನೋಡು, ನಿನಗೆ

ಬಾಸಿಂಗಬಲ ಬಂದೇತಿ, ಧನಿಕ ಗಂಡ ಸಿಗತಾನ, ನಾ ಹೇಳಿದ್ದು ಸುಳ್ಳು ಅಂತಾ ತಿಳಿಬ್ಯಾಡ, ನಿನ್ನ ಹಣೆ ಮ್ಯಾಲಿನ ರೇಖಾ ಹೇಳತಾವ; ನಿನ್ನ ಗಂಡ ಇದೇ ಪಟ್ಟಣದಾಗ ಸಿಗತಾನ; ಬಂದ ಎಡಿ ಬಿಡಬ್ಯಾಡ, ಯಾರ ಬ್ಯಾಡಂದ್ರು ಕೇಳಬ್ಯಾಡ; ಇದರಿಂದ ನಿನಗೆ ಸುಖ ಸಿಗತೈತಿ" ಹೀಗೆಂದು ಹೇಳಿದಳು. ಆಗ ಕಮಾಲನು ತನ್ನ ಬಕ್ಕಣದಲ್ಲಿದ್ದ ಒಂದು ಚಿತ್ರದ ಪುಸ್ತಕವನ್ನು ತೆಗೆದನು.

ಆ ಪುಸ್ತಕವು ಒಬ್ಬ ಜೋಯಿಸನದಿತ್ತು. ಅದರಲ್ಲಿ ಅನೇಕ ಬಣ್ಣದ ಚಿತ್ರಗಳಿದ್ದವು. ಜೋಯಿಸನ ಹೆಸರು ಭಿಕ್ಕು ಶಾಸ್ತ್ರಿಯೆಂದಿತ್ತು. ಜನರು ಅವನನ್ನು ಬಿಕ್ಕಿ ಶಾಸ್ತ್ರಿಯೆಂದು ಕರೆಯುತ್ತಿದ್ದರು. ಯಾಕೆಂದರೆ ಅವನು ಬೀದಿಗಳಲ್ಲಿ, ರೈಲು ನಿಲ್ದಾಣಗಳಲ್ಲಿ, ಧರ್ಮಶಾಲೆಗಳಲ್ಲಿ ತಿರುಗಾಡಿ ಜನರಿಗೆ ಭವಿಷ್ಯ ಹೇಳಿ ಒಂದು ಬಿಲ್ಲಿಯ ದಕ್ಷಿಣೆಯಿಂದ ತೃಪ್ತನಾಗುತ್ತಿದ್ದನು. ಅವನ ಭವಿಷ್ಯವು ವೇಳೆ, ಮುಹೂರ್ತಗಳ ಲೆಕ್ಕದ ಮೇಲೆ ಅವಲಂಬಿಸಿರಲಿಲ್ಲ, ತನ್ನ ಚಿತ್ರದ ಪುಸ್ತಕದಲ್ಲಿ ಜನರ ಬೆರಳನ್ನಿಡಹೇಳಿದಾಗ ಯಾವ ಚಿತ್ರವು ಬರುತ್ತಿತ್ತೋ ಆ ಚಿತ್ರದ ಮೇಲಿಂದ ಭವಿಷ್ಯ ಹೇಳುತ್ತಿದ್ದನು. ಅದರಲ್ಲಿ ಹುಲಿ, ಕರಡಿ, ಹಾವು, ಚೇಳು, ದೇವ, ರಾಕ್ಷಸ, ಆಕಳು, ಎತ್ತು, ಕೋಣ, ಗಿಳಿ, ಪಾರಿವಾಳ ಮನುಷ್ಯ ಮುಂತಾದವುಗಳ ಚಿತ್ರಗಳಿದ್ದವು. ಕಮಾಲನು ಆ ಪುಸ್ತಕದಲ್ಲಿ ದುರಂಧರನ ಒಂದು ಚಿತ್ರವನ್ನು ಅಂಟಿಸಿಕೊಂಡು ಬಂದಿದ್ದನು. ಅವನು ಕೊರವಂಜಿಯ ಮಾತು ಮುಗಿದಕೂಡಲೇ ಮಾಧುರಿಯನ್ನು ಕುರಿತು, "ತಾಯಿ, ಈ ಪುಸ್ತಕದಲ್ಲಿ ನಿನ್ನ ಇಷ್ಟಬಂದ ಕಡೆಗೆ ಬೆರಳನ್ನಿಡು", ಎಂದು ಹೇಳಿದನು. ಮಾಧುರಿಯು ಆಗ ತನ್ನ ಬೆರಳನ್ನು ಅದರಲ್ಲಿ ಒಂದು ಕಡೆಗೆ ಇಟ್ಟಳು. ಬೆರಳು ಅನಾಯಾಸವಾಗಿ ಧುರಂಧರನ ಚಿತ್ರವಿದ್ದ ಪುಟದಲ್ಲಿಯೇ ಸುಸುಳಿತು. ಕಮಾಲನು ಅದನ್ನು ಹರ್ಷದಿಂದ ತೆರೆದು ಮಾಧುರಿಗೆ ತೋರಿಸಿ, "ಇದೋ, ನೋಡು, ಈ ಚಿತ್ರಪಟದಲ್ಲಿರುವ ವರನೇ ನಿನಗೆ ಅನುರೂಪನಾದ ವರನು. ಅವನೇ ನಿನ್ನ ಪತಿಯಾಗುವನೆಂಬುದು ನಿನ್ನ ಬೆರಳಿನ ಆಯ್ಕೆಯಿಂದ ಹೊರಬಿದ್ದಿರುವದು.

ಇವನನ್ನು ವರಿಸಲು ಒಪ್ಪಿಗೆಕೊಟ್ಟರೆ ನಾನು ವರನನ್ನು ನಿನ್ನ ಸ್ವಾಧೀನ ಮಾಡುವ ಹೊಣೆ ಹೊರುವೆನು." ಎಂದರು.

ಈ ಎಲ್ಲ ಆಟಿಕೆಯನ್ನು ಕಂಡು ಮಾಧುರಿಯು ಮರುಳಾಗಲಿಲ್ಲ. ಅವಳು ಮುಗ್ಧಭಾವದವಳಾದರೂ ತಂದೆ ತಾಯಿಗಳಿಗೆ ಆಜ್ಞಾಧಾರಳೂ ಅವರ ಒಪ್ಪಿಗೆಯಿಲ್ಲದೆ ಯಾವದೊಂದು ಕೆಲಸಮಾಡಲು ಮುಂದುವರಿಯದವಳೂ ಆಗಿದ್ದಳು. ಪ್ರಾಯದ ವಯಸ್ಸಿನವಳಾದರೂ ಅವಳ ಮನದಲ್ಲಿ ಕಾಮವಾಸನೆಯು ಕುಡಿ ಎದ್ದಿರಲಿಲ್ಲ. ಈವರೆಗೆ ಮನೆಯಲ್ಲಿ ಅವಳು ಮದುವೆಯ ಮಾತನ್ನು ಕೇಳಿರಲಿಲ್ಲ. ಆದುದರಿಂದ ಅವಳು ತಂದೆಯ ಒಪ್ಪಿಗೆಯಿಲ್ಲದೆ ಯಾವದನ್ನೂ ಹೇಳಲಾರೆನೆಂದು ಸ್ಪಷ್ಟವಾಗಿ ಉತ್ತರ ಕೊಟ್ಟಳು. ಆಗ ಕಮಾಲನು ತನ್ನ ಪ್ರಯತ್ನವು ಸಫಲವಾಗಲಿಲ್ಲವೆಂದು ವಿಷಾದಪಟ್ಟನು. ಅವನು ಬಾಡಿದ ಮುಖವುಳ್ಳವನಾಗಿ ಹಿಂದಿರುಗಿದನು. ಈ ವೇಳೆಯಲ್ಲಿ ದುರಂಧರನು ತನ್ನ ಬಯಕೆಯನ್ನು ಕಮಾಲನು ಹೇಗಾದರೂ ಈಡೇರಿಸಿಕೊಂಡು ಬರುವನೆಂದು ಮನೆಯಲ್ಲಿ ಆತುರದಿಂದ ಕಮಾಲನ ಬರುವಿಕೆಯನ್ನೇ ಕಾಯ್ದುಕೊಂಡು ಕುಳಿತಿದ್ದನು. ಕಮಾಲನ ಇಳಿಮೋರೆಯನ್ನು ನೋಡಿದೊಡನೆ ಅವನ ಹೃದಯದಲ್ಲಿ ತಣ್ಣೀರೆರೆದಂತಾಯಿತು. ಆದರೂ, •ದುರಂಧರನು ತಾಳ್ಮೆಯಿಲ್ಲದೆ, "ನೀನು ಹೋದ ಕಾರ್ಯವು ಕೈಗೂಡಿತೇ" ಎಂದು ಪ್ರಶ್ನೆಮಾಡಿದನು. ಆಗ ಕಮಾಲನು ತಾನು ಮಾಡಿದ ಎಲ್ಲ ಉಪಾಯಗಳನ್ನು ವಿವರಿಸಿ ಹೇಳಿ ಅನಂತರದಲ್ಲಿ ಮಾಧುರಿಯು ಕೊಟ್ಟ ಉತ್ತರವನ್ನು ಹೇಳಿದನು. ಆಗ ದುರಂಧರನ ಉರಿಯುವ ಹೃದಯದಲ್ಲಿ ಪೆಟ್ರೋಲ್ ಎಣ್ಣೆಯನ್ನು ಸುರುವಿದಂತಾಯಿತು. ಅವನ ಉದ್ವೇಗಕ್ಕೆ ಮೇರೆಯೇ ಇಲ್ಲದಾಯಿತು. ಕ್ಷಣಹೊತ್ತು ಅವನು ಮೂಢನಂತೆ ಮೌನದಿಂದ ಕುಳಿತುಕೊಂಡನು.

ಬಯಸಿದ ವಸ್ತುವು ದೊರಕದಾಗ ಮನುಷ್ಯನು ಭ್ರಾಂತನಾಗುವನು. ಭ್ರಾಂತಿಯ ಆವೇಶದಲ್ಲಿ ವಿಚಾರಶೂನ್ಯನಾಗುವನು. ಆ ಸ್ಥಿತಿಯಲ್ಲಿ ಅತ್ಯಾಚಾರಕ್ಕೆ ದುಡುಕುವನು. ದುರಂಧರನು ಮತಿವಿಹೀನನಾಗಿ ಇಂಥ ಅಪ್ರಿಯವಾದ ಕೆಲಸಕ್ಕೆ ಮನವೆಳಸಿ ಮಾಧುರಿಯನ್ನು ಬಲಾತ್ಕಾರದಿಂದ ಸ್ವಾಧೀನಮಾಡಿಕೊಳ್ಳಬೇಕೆಂದು ಕಮಾಲನಿಗೆ ತಿಳಿಸಿದನು. ಈ

ಕಾರ್ಯವು ಅನರ್ಥವುಳ್ಳದ್ದೆಂದು ಕಮಾಲನಿಗೆ ಅರಿಕೆಯಿದ್ದುದರಿಂದ ಅವನು ದುರಂಧರನಿಗೆ ವಿವೇಕವನ್ನು ಹೇಳಬಯಸಿ, "ಒಡೆಯಾ! ನಿನ್ನ ಈ ವಿಚಾರವು ಕಷ್ಟಸಾಧ್ಯವಾಗಿರುವದಲ್ಲದೆ ಪರಿಣಾಮದಲ್ಲಿ ದುಃಖಮಯ ನಾದದ್ದು. ಪರಸತಿಯರಿಗೆ ಮನವೆಳಿಸುವದು ಪರಮ ಪಾಪವೆಂದು ಶಾಸ್ತ್ರಗಳು ಹೇಳುತ್ತವೆ. ಆದರೆ ಶಾಸ್ತ್ರಗಳು ಒತ್ತಟ್ಟಿಗಿರಲಿ, ಜಗತ್ತಿನಲ್ಲಿ ಜರುಗಿದ ಉದಾಹರಣೆಗಳನ್ನು ನೋಡಿದರೆ ದುರ್ಗತಿಯು ಸಂಭವಿಸಿದ್ದೇ ಕಂಡು ಬರುತ್ತದೆ. ಪತಿಪರಾಯಣಳಾದ ಸೀತೆಯನ್ನು ಅಪಹರಿಸಿದ ರಾವಣನು ನಾಶವಾದನು. ಸುಗ್ರೀವನ ಸತಿಯನ್ನು ಸ್ವಾಧೀನಮಾಡಿಕೊಂಡ ವಾಲಿ ರಾಮಬಾಣಕ್ಕೆ ತುತ್ತಾದನು. ದಮಯಂತಿಯ ರೂಪಕ್ಕೆ ಮನವೆಳಸಿದ ವ್ಯಾಧನು ಅಗ್ನಿಗೆ ಆಹುತಿಯಾದನು. ಕಪಟತನದಿಂದ ಅಹಲ್ಯೆಯೊಡನೆ ಸಂಭೋಗ ಮಾಡಿದ ದೇವೇಂದ್ರನು ಗೌತಮ ಋಷಿಯ ಶಾಪದಿಂದ ದೇಹವಿಕಾರ ಹೊಂದಿದನು. ಆದುದರಿಂದ ನೀನು ಈ ವಿಚಾರವನ್ನು ತೊರೆಯುವದು ಒಳಿತು," ಎಂದು ಕಮಾಲನು ಉಪದೇಶಮಾಡಿದನು.

ಈ ಉಪದೇಶವು ದುರಂಧರನಿಗೆ ವಿಷರೂಪವಾಗಿ ತೋರಿತು. ಅವನು ತನ್ನ ದುರಾಗ್ರಹದಿಂದ ಹೇಳಿದ್ದೇನೆಂದರೆ, "ಕಮಾಲಾ! ಈ ಕಾರ್ಯದಲ್ಲಿ ನಾನು ಮರಣ ಹೊಂದಿದರೂ ನಾನು ಅಂಜುವದಿಲ್ಲ. ಯಾಕೆಂಬರೆ ಮಾಧುರಿಯನ್ನು ಮರೆಯುವದು ನನಗೆ ಸಾಧ್ಯವಿಲ್ಲ. ಅವಳನ್ನು ನೆನೆದು ನೆನೆದು ಕೊರಗಿ ಸಾಯುವದಕ್ಕಿಂತ ಒಮ್ಮೆಲೇ ಗುಂಡಿಗೆ ಎದೆಗೊಟ್ಟು ಸಾಯುವದು ಲೇಸು. ಆದುದರಿಂದ ನಾವು ಈ ಮಾರ್ಗವನ್ನು ಅನುಸರಿಸಿಯೇ ತೀರಬೇಕು" ಎಂದು ಖಂಡಿತವಾಗಿ ಹೇಳಿದನು. ಆಗ ಕಮಾಲನು ಮತ್ತಾವ ಉಪಾಯಗಾಣದೆ ತನ್ನ ಸ್ಥಿತಿಯು ರಾವಣನಿಗೆ ಬುದ್ಧಿ ಹೇಳಿದ ಮಾರೀಚನಂತಾಯಿತೆಂದು ಮನದಲ್ಲಿ ಮರುಗಿದನು. ಆದರೆ ಒಡೆಯನ ಮಾತು ಮೀರಿದಲ್ಲಿ ಅವನ ಅನ್ನ ವಸ್ತ್ರಗಳಿಗೆ ಅಭಾವವುಂಟಾಗುವದೆಂದು ಅವನಿಗೆ ಅರಿಕೆಯಿತ್ತು. ಮಾಧುರಿಯನ್ನು ಅಪಹರಿಸುವದು ಸುಲಭವಾದ ಕೆಲಸವಿರಲಿಲ್ಲ. ಅವಳ ಮನೆಯ ದ್ವಾರದಲ್ಲಿ ಬಿಚ್ಚುಗತ್ತಿಯ ಕಾವಲುಗಾರರು. ಅದರ ಮೇಲೂ ಎಷ್ಟೋ ಜನ ಸೇವಕರ ಸಮೂಹ, ಕುದುರೆ ಸವಾರರು, ಮೋಟರ

ಸಾರಥಿಗಳು ಯಾವಾಗಲೂ ಜಾಗ್ರತೆಯಿಂದ ತಮ್ಮ ಕೆಲಸಗಳಲ್ಲಿ ನಿರತ ರಾಗಿರುತ್ತಿದ್ದರು. ಇಂಥ ಬಿಕ್ಕಟ್ಟಿನ ಸ್ಥಳದಿಂದ ಅವಳನ್ನು ಎತ್ತಿಕೊಂಡು ಹೋಗುವದು ಅಸಾಧ್ಯವಾಗಿತ್ತು. ಈ ಬಿಕ್ಕಟ್ಟನ್ನು ಬಗೆಹರಿಸಲು ಕಮಾಲನೂ ದುರಂಧರನೂ ೨—೩ ದಿನಗಳ ವರೆಗೆ ಆಲೋಚನೆ ಮಾಡಿದರು. ಕಮಾಲನಿಗೆ ಇನ್ನೊಂದು ವಿಚಾರವು ಹೊಳೆಯಿತು. ಅದೇನೆಂದರೆ ಮಂತ್ರತಂತ್ರಗಳಿಂದ ವಶೀಕರಣ ಮಾಡಿಕೊಳ್ಳುವ ವಿದ್ಯೆಯಲ್ಲಿ ಪ್ರವೀಣನಾದ ಒಬ್ಬ ಮಂತ್ರವಾದಿಯ ನೆನಪು ಅವನಿಗುಂಟಾಯಿತು. ಆ ಕ್ಷಣವೇ ಕಮಾಲನು ಅವನಲ್ಲಿಗೆ ಹೋಗಿ ಒಂದು ಯಂತ್ರದ ತಾಯಿತವನ್ನು ಮಾಡಿಸಿದನು. ಅದನ್ನು ವಶಮಾಡಿಕೊಳ್ಳತಕ್ಕವನು ಕೂತುಕೊಳ್ಳುವ ಸ್ಥಳದಲ್ಲಿ ಕಟ್ಟತಕ್ಕುದಾಗಿತ್ತು. ಇದನ್ನು ಸಾಧಿಸುವದೆಂತು? ಇದಕ್ಕಾಗಿ ಕಮಾಲನು ಮಾಧುರಿಯ ಮನೆಯ ಕಾವಲುಗಾರರೊಡನೆ ಸ್ನೇಹ ಬೆಳಸಬೇಕೆಂದು ಹವಣಿಸಿದನು.

ಕಾವಲುಗಾರರು ಕಮಾಲನಿಗೆ ಪರಿಚಯಸ್ಥರಿರಲಿಲ್ಲ ಅವರ ಹತ್ತಿರಕ್ಕೆ ಹೋಗಿ ಅವರನ್ನು ಒಲಿಸಲು ತನ್ನ ಸಂಗಡ ಸೆರೆಯ ಸೀಸೆಗಳನ್ನೂ ತರತರದ ತಿನಸಿನ ವಸ್ತುಗಳನ್ನೂ ತೆಗೆದುಕೊಂಡು ಅವನು ಹೋದನು. ಗೆಳೆತನ ಬೆಳೆಯಿಸುವದರಲ್ಲಿ ಅವನು ಚತುರನಾದುದರಿಂದ ಮೊದಲು ಅವರ ಸಮೀಪಕ್ಕೆ ಹೋಗಿ ವಿನಯದಿಂದ ಶರಣು ಮಾಡಿ ನಿಂತನು. ಕಾವಲುಗಾರರು, "ಅಯ್ಯಾ, ನೀನಾರು ಯಾವ ಕೆಲಸಕ್ಕಾಗಿ ಬಂದಿರುವೆ" ಎಂದು ಕೇಳಿದರು. ಕಮಾಲನು, "ಮಿತ್ರರೇ ನಾನೊಬ್ಬ ಬಡ ಸೇವಕ, ನಿಮ್ಮ ಧನಿಯಲ್ಲಿ ನನಗೇನಾದರೂ ನೌಕರಿ ಸಿಗುವದೆಂಬ ಉದ್ದೇಶದಿಂದ ಬಂದಿರುವೆ. ನೀವು ನಿಮ್ಮ ಧನಿಯನ್ನು ವಿಚಾರಿಸಿ ಹೇಳುವಿರಾ?" ಎಂದು ಅಂದನು. ಅವರು ಅವನ ವಿನಯ ವಚನದಿಂದ ಮನಸ್ಸುಕರಗಿದವರಾಗಿ ಅವನನ್ನು ತಮ್ಮ ಹತ್ತರ ಕುಳ್ಳಿರಿಸಿಕೊಂಡರು, ಅವನ ಕ್ಷೇಮ ಸಮಾಚಾರವನ್ನು ಸಹಾನುಭೂತಿಯಿಂದ ಕೇಳುತ್ತ ಕುಳಿತರು. ಕಮಾಲನು ಅವರ ಅನುಕಂಪ, ಪ್ರೇಮಗಳನ್ನು ಪಡೆದೆನೆಂದು ಭರವಸೆಯಿಂದ ಅವರೆದುರಿಗೆ ತನ್ನ ಫಲಾಹಾರದ ಗಂಟನ್ನು ಬಿಚ್ಚಿ ಅವರನ್ನು ತೃಪ್ತಿಗೊಳಿಸಿದನು. ಆ ಮೇಲೆ ಅವರಿಗೆ ತಾನು ತಂದ

ಸುರಾ ಶೀಸೆಗಳನ್ನು ಕುಡಿಯಲು ಕೊಟ್ಟನು. ಸ್ವಲ್ಪ ಹೊತ್ತಿನಲ್ಲಿ ಅವರು ನಿಸೆಯ ಮದದಿಂದ ಎಚ್ಚರದಪ್ಪಿ ಒರಗಿಕೊಂಡರು. ಆಗ ಕಮಾಲನು ಅದೇ ಉತ್ತಮ ಸಂಧಿಯೆಂದು ಭಾವಿಸಿ ಮೆಲ್ಲಗೆ ಮಾಧುರಿಯ ಕೋಣೆಯ ಕಡೆಗೆ ಸಾಗಿದನು. ಕೋಣೆಯ ಬಾಗಿಲು ತೆರೆದಿತ್ತು, ಆದರೆ ಮಾಧುರಿಯು ಅಲ್ಲಿರಲಿಲ್ಲ. ಕಮಾಲನಿಗೆ ಇದೇ ಬೇಕಾಗಿತ್ತು. ಅವನು ಕೋಣೆಯೊಳಗೆ ಪ್ರವೇಶಮಾಡಿ ಮಾಧುರಿಯು ಕುಳಿತುಕೊಳ್ಳುವ ಕುರ್ಚಿಯ ಅಡಿಯಲ್ಲಿ ಯಂತ್ರದ ತಾಯತವನ್ನು ಕಟ್ಟಿ ತಡಮಾಡದೆ ಹೊರಗೆ ಬಂದು ಹೆಬ್ಬಾಗಿಲಿನಿಂದ ನುಸುಳಿ ಹೋದನು.

ಅಲ್ಲಿಂದ ಪಾರಾಗಿ ಕಮಾಲನು ಮನೆಯ ಸಮೀಪಕ್ಕೆ ಬಂದಾಗ ಅವನ ಕಾಲನ್ನು ಒಂದು ಚೇಳು ಕಚ್ಚಿತು. ಅದರ ನೋವಿನಿಂದ ಕಳವಳ ಪಡುತ್ತ ಮನೆಯೊಳಗೆ ಹೊಕ್ಕನು. ಆಗ ಚೇಳಿನ ವಿಷವು ಟೊಂಕದ ವರೆಗೆ ಏರಿದ್ದರಿಂದ ನೋವನ್ನು ಸಹಿಸದೆ ಅವನು ನೆಲದ ಮೇಲೆ ಬಿದ್ದು ಹೊರಳಾಡಹತ್ತಿ ಚೀರಾಡಿದನು. ಮಹಡಿಯ ಮೇಲೆ ಕುಳಿತಿದ್ದ ದುರಂಧರನು ಅವನ ಕೂಗನ್ನು ಕೇಳಿ ಕೆಳಗಿಳಿದು ಬಂದನು. ಕಮಾಲನ ಕನಿಕರ ಸ್ಥಿತಿಯನ್ನು ನೋಡಿ, "ಕಮಾಲಾ! ಏನಾಯಿತು? ನಿನ್ನನ್ನು ಯಾರಾದರೂ ಹೊಡೆದರೆ? ಅಥವಾ ನಿನ್ನ ತಾಯಿಯಾಗಲಿ, ತಂದೆಯಾಗಲಿ ಅಥವಾ ಪ್ರಿಯಳಾದವಳಾವಳಾದರೂ ಮರಣ ವಶರಾದರೋ?'' ಹೇಗೆಂದು ವಿಚಾರಿಸಿದನು. ಕಮಾಲನು ಉಬ್ಬಸಬಿಡುತ್ತ ತನಗೆ ಚೇಳು ಕಚ್ಚಿದೆಯೆಂದು ಹೇಳಿದನು. ಕಾವಲುಗಾರರೊಡನೆ ಮದ್ಯಪಾನ ಮಾಡಿದವನಿಗೆ ಚೇಳು ಕಡಿದಿರುವಾಗ ಕೇಳುವದೇನು. ಅವನ ಬಾಯಿಯಿಂದ ಅಸಂಬದ್ಧವಾದ ಯದ್ವಾತದ್ವಾ ಮಾತುಗಳು ಹೊರಡಹತ್ತಿದವು. ಅವನು ಮಾಡಿಬಂದದ್ದು ಪಾಪಕೃತಿಯು. ಪಾಪಕ್ಕೆ ಪ್ರಾಯಶ್ಚಿತ್ತವು ತಪ್ಪೀತೇ? ಸ್ವಲ್ಪ ಹೊತ್ತಿನಲ್ಲಿ ನಿಸೆಯ ಮದವು ಆವರಿಸಿದ್ದರಿಂದ ಅವನು ಗಾಳಿಗೆ ಉರುಳಿ ಬಿದ್ದ ಮರದಂತೆ ಮಲಗಿದನು. ಕಮಾಲನು ಹೋದ ಕೆಲಸವೇನಾಯಿತೆಂಬದನ್ನು ಕೇಳಲು ದುರಂಧರನು ಕುತೂಹಲವುಳ್ಳವನಾಗಿದ್ದನು. ಆದರೆ ಅವನ ದುರವಸ್ಥೆ ಹೀಗಾಯಿತು. ಒಂದು ಹಗಲು ಒಂದು ರಾತ್ರಿ ಪೂರಾ ಕಳೆದ ನಂತರ ಕಮಾ

ಲನು ಕಣ್ಣು ತೆರೆದನು. ಆ ವರೆಗೆ ದುರಂಧರನಿಗೆ ಜೀವದಲ್ಲಿ ಜೀವವಿರಲಿಲ್ಲ. ಯಾಕೆಂದರೆ ಅವನು ಮರಣ ಹೊಂದಿದಲ್ಲಿ ದುರಂಧರನ ಬಲಗೈ ಹೋದಂತಾಗುತ್ತಿತ್ತು. ಅವನು ಎಚ್ಚರಾದುದನ್ನು ಕಂಡು ದುರಂಧರನ ಕುಗ್ಗಿದ ಹೃದಯವು ಕುಡಿಚಾಚಿತು.

ಕಮಾಲನು ಪೂರ್ಣ ಎಚ್ಚತ್ತ ಮೇಲೆ ತಾನು ಸಾಧಿಸಿದ ಕೆಲಸವನ್ನು ತನ್ನ ಒಡೆಯರಿಗೆ ಅರಿಕೆ ಮಾಡಿದನು. ಆದರೆ ಮಂತ್ರದ ತಾಯಿತದಿಂದ ಯಾವ ಪರಿಣಾಮವೂ ಘಟಿಸಲಿಲ್ಲ. ಒಂದೆರಡು ವಾರಗಳು ಕಳೆದು ಹೋದರೂ ಏನೂ ಬದಲಾವಣೆಯು ಸಂಭವಿಸಲಿಲ್ಲ. ಇದನ್ನರಿತು ಕೊಂಡು ಕಮಾಲನು ಒಬ್ಬ ಕುಹಕ ವೈದ್ಯನಿಂದ ಒಂದು ಭ್ರಾಂತಿಯ ಭಸ್ಮವನ್ನು ಸಂಪಾದಿಸಿದನು. ಅದನ್ನು ಮಾಧುರಿಯ ಮೇಲೆ ಪ್ರಯೋಗ ಮಾಡುವ ಸಾಧನವೇನೆಂಬದು ಬಿಕ್ಕಟ್ಟನದಾಗಿತ್ತು. ಕಮಾಲನ ಕುಯುಕ್ತಿಗೆ ಇದು ಅಸಾಧ್ಯವಾಗಿರಲಿಲ್ಲ. ದುರಂಧರನ ಕೈ ಬೆರಳಿನಲ್ಲಿದ್ದ ಒಂದು ಬೆಲೆಯುಳ್ಳ ಹರಳಿನ ಉಂಗುರವಿತ್ತು. ಅದನ್ನು ಹಾಗು ಇನ್ನೊಂದು ಬಂಗಾರದ ಬಳೆಯನ್ನು ತೆಗೆದುಕೊಂಡು ಕಮಾಲನು ಮಾಧುರಿಯ ಮಂದಿರಕ್ಕೆ ಹೊರಟನು. ಈ ಮೊದಲು ತಾನು ಗೆಳೆತನಮಾಡಿದ ಕಾವಲುಗಾರರ ಹತ್ತರಕ್ಕೆ ಹೋಗಿ ಅವರೊಡನೆ ಹಿತವಚನಗಳನ್ನು ಆಡುತ್ತ ಕುಳಿತನು. ಅವರಿಗೆ ತಾನು ತಂದ ಫಲಾಹಾರಗಳನ್ನು ಕೊಟ್ಟು ಅವರ ಪ್ರೇಮಗಳಿಸಿದನು. ಕೆಲಹೊತ್ತಿನ ಮೇಲೆ ಒಬ್ಬ ಕಾವಲುಗಾರನನ್ನು ಓರೆಗೆ ಕರೆದು ತನ್ನ ಗುಟ್ಟಿನ ಸಂಗತಿಯನ್ನು ತಿಳಿಸಿದನು. ತಾನು ತಂದ ಭ್ರಾಂತಿಯ ಭಸ್ಮವನ್ನು ಮಾಧುರಿಯು ಚಹಾ ಕಾಫಿ ಪಾನಗಳ ಸಂಗಡ ಕುಡಿಯುವಂತೆ ಮಾಡಬೇಕೆಂತಲೂ, ಇದನ್ನು ದಾಸಿಯಮೂಲಕ ಏಕಾಂತದಲ್ಲಿ ಹಂಚಿಕೆಮಾಡಬೇಕೆಂತಲೂ, ಹಾಗೂ ಆ ಕೆಲಸದ ಪ್ರತಿಫಲಕ್ಕಾಗಿ ತಾನು ತಂದ ಬೆಲೆಯುಳ್ಳ ಒಡವೆಗಳನ್ನು ಕೊಡುವೆನೆಂತಲೂ ಹೇಳಿದನು. ಕಾವಲುಗಾರನು ಝಗ್ ಎಂದು ಹೊಳೆಯುವ ಆಭರಣಗಳನ್ನು ನೋಡಿ ಆಶೆಯ ಬಲೆಗೆ ಆಹುತಿಯಾದನು.

ಆಗ ಕಮಾಲನು ಕಾವಲುಗಾರನನ್ನು ಕುರಿತು, "ಇಗೋ, ಈ

ವಜ್ರದ ಉಂಗುರವನ್ನು ನೀನು ತೆಗೆದುಕೋ, ಈ ಬಂಗಾರದ ಬಳೆಯ ಜೊತೆಯನ್ನು ದಾಸಿಗೆ ಕೊಡು. ಈ ಭಸ್ಮವನ್ನು ಚಹಾಪಾನದಲ್ಲಿ ಬೆರೆಸಿ ಮಾಧುರಿಗೆ ಕುಡಿಸುವಂತೆ ದಾಸಿಗೆ ತಿಳಿಸು. ಮತ್ತು ನನ್ನ ಒಡೆಯನ ಈ ಚಿತ್ರಪಟವನ್ನು ಮಾಧುರಿಯ ಮುಂದಿರಿಸುವಂತೆ ಹೇಳು" ಎಂದು ಹೇಳಿ ಕಾವಲುಗಾರನಿಂದ ವಚನ ತೆಗೆದುಕೊಂಡು ತಡವಿಲ್ಲದಂತೆ ಮನೆಗೆ ಮರಳಿದನು. ಕಪಾಲನು ಬಿತ್ತಿಹೋದ ಬೀಜವು ಕುಡಿ ಇಡಲು ಪ್ರಾರಂಭವಾಯಿತು. ಅನ್ನ, ಚಿನ್ನಗಳು ಯಾರನ್ನು ಮರಳುಮಾಡಲಾರವು! ಕಣಕವನ್ನು ಹಚ್ಚಿದ ಮದ್ದಲೆಯು ಸಹ ಖಣ್ ಖಣ್ ಎಂದು ಧ್ವನಿಮಾಡುವದು. ಮಿಂಚಿನಂತೆ ಮಿರುಗುವ ಉಂಗುರವನ್ನು ಬೆರಳಿನಲ್ಲಿಟ್ಟುಕೊಂಡು ಹೊರಳಿಸಿ ನೋಡುತ್ತ ಕಾವಲುಗಾರನು ಉಬ್ಬುಬ್ಬಿ ನಲಿದಾಡಿದನು.

ಆ ದಿನ ಸಾಯಂಕಾಲದ ಸಮಯದಲ್ಲಿ ಮಾಧುರಿಯ ಸೇವೆ ಮಾಡುತ್ತಿದ್ದ ದಾಸಿಯೊಬ್ಬಳು ಅವಾರದ ಒಂದು ಮೂಲೆಯಲ್ಲಿ ಭಾಂಡಿಗಳನ್ನು ತೊಳೆಯುತ್ತ ಕುಳಿತಿದ್ದಳು. ಕಾವಲುಗಾರನು ಕತ್ತಲೆಯಲ್ಲಿ ಸಾವಕಾಶವಾಗಿ ಅವಳ ಹತ್ತಿರಕ್ಕೆ ಹೋಗಿ ಅವಳೊಡನೆ ಕೆಲವು ಸವಿಮಾತುಗಳನ್ನಾಡಿದನು. ಆ ಮೇಲೆ ಅವಳನ್ನು ಕುರಿತು, "ತಾಯಿ, ನೀನು ಈವರೆಗೆ ಬಡತನದಲ್ಲಿ ಬಳಲುತ್ತಿರುವಿ; ನಿನ್ನ ಬಡತನ ಹಿಂಗುವ ಉಪಾಯ ಹೇಳಿದರೆ ಒಪ್ಪುವಿಯಾ?" ಎಂದನು. ಆಗ ದಾಸಿಯು, "ಏನಪ್ಪಾ, ಇದಕ್ಕೆ ಒಪ್ಪದವರಾರು? ಬಡತನದ ಬಾಳು ಅದೃಷ್ಟಹೀನರಿಗೆ ತಪ್ಪಿದುದಲ್ಲ. ಆದರೆ ದೈವಯೋಗವಾಗುವ ಸುಸಂಧಿಯುಂಟಾದಾಗ ಅದನ್ನು ನಿರಾಕರಿಸುವದು ಮೂರ್ಖತನವಲ್ಲವೇ" ಎಂದು ಉತ್ತರ ಕೊಟ್ಟಳು. ಈ ಮಾತನ್ನು ಕೇಳಿದಾಕ್ಷಣ ಕಾವಲುಗಾರನಿಗೆ ಆನಂದವಾಯಿತು ಆಗ ಅವನು ಬಂಗಾರದ ಬಳೆಯ ಜೋಡನ್ನು ಜೊಕ್ಕಣದಿಂದ ಹೊರಗೆತೆಗೆದು ಅದರ ಮೇಲೆ ಬ್ಯಾಟರಿ ಬೆಳಕನ್ನು ಚಲ್ಲಿದನು. ಲಕ ಲಕ ಹೊಳೆಯುವ ಬಳೆಯ ಜೋಡನ್ನು ನೋಡಿದೊಡನೆ ದಾಸಿಯ ಬಾಯಲ್ಲಿ ನೀರೂರಿತು. ಕಾವಲುಗಾರನು ಅವಳನ್ನು ಕುರಿತು, "ಇದೋ, ನೋಡು ಈ ಬಳೆಗಳನ್ನು ನಿನಗೆ ಕೊಡುವೆ, ಇದಕ್ಕಾಗಿ

ನೀನೊಂದು ಕೆಲಸಮಾಡಬೇಕು; ಈ ಭಸ್ಮದ ಪುಡಿಯನ್ನು ಚಹಾ ಪಾನದಲ್ಲಿ ಬೆರೆಸಿ ಮಾಧುರಿಗೆ ಕುಡಿಯಲಿಕ್ಕೆ ಕೊಡು; ಈ ಚಿತ್ರ ಪಟವನ್ನು ಅವಳ ಮೇಜಿನಮೇಲಿರಿಸು. ಇದು ನಿನಗೆ ಸಾಧ್ಯವೋ", ಎಂದು ಕೇಳಿದನು. ಆವರೆಗೆ ಸಾಸಿವೆಯಷ್ಟು ಚಿನ್ನವನ್ನು ಕಾಣದ ದಾಸಿಯು ಹತ್ತುತೊಲೆಯ ಆಭರಣಕ್ಕೆ ಮರುಳಾಗಿ ಆ ಕೆಲಸ ಮಾಡಲು ಒಪ್ಪಿ ಆಭರಣವನ್ನೂ ಭಸ್ಮವನ್ನೂ ತೆಗೆದುಕೊಂಡು ಕುಪ್ಪಸದ ಮರೆಯಲ್ಲಿ ಮುಚ್ಚಿಟ್ಟುಕೊಂಡಳು. ಮರ ದಿನ ಮುಂಜಾನೆ ಚಹಾಪಾನದ ವೇಳೆಗೆ ಮಾಧುರಿಗೆ ಕೊಡಬೇಕಾದ ಪಾನದಲ್ಲಿ ಆ ಭಸ್ಮವನ್ನು ಬೆರೆಸಿಕೊಂಡು ಅದನ್ನು ಮಾಧುರಿಗೆ ಕುಡಿಯಲು ಕೊಟ್ಟಳು. ಭಸ್ಮದ ಬೆರಿಕೆಯಿಂದ ಚಹಾಪಾನವು ಕಹಿಯಾಗಿತ್ತು. ಆದರೆ ಅದನ್ನು ಕುಡಿದನಂತರ ಮಾಧುರಿಗೆ ಕಹಿಯಾಗಿರುವದು ಕಂಡುಬಂದಿತು.

ಭಸ್ಮವು ಭ್ರಾಮಕಸ್ವರೂಪದ್ದಾಗಿದ್ದುದರಿಂದ ನಾಲ್ಕಾರು ನಿಮಿಷ ಗಳಲ್ಲಿಯೇ ಮಾಧುರಿಯ ತಲೆಯು ತಿರುಗಹತ್ತಿತು. ಅವಳು ಸುಂದು ಹಿಡಿದವಳಂತೆ ಸುಮ್ಮನೆ ಕುಳಿತಳು. ಆಗ ಅವಳ ದೃಷ್ಟಿಯು ದಾಸಿಯು ಇಟ್ಟುಹೋದ ಚಿತ್ರಪಟದ ಕಡೆಗೆ ತಿರುಗಿತು. ಚಕ್ರದಂತೆ ತಿರುಗುತ್ತಿದ್ದ ತಲೆಯಲ್ಲಿ ಆ ಚಿತ್ರಪಟವು ಸಹ ಸೇರಿಕೊಂಡು ಮನೋಭ್ರಾಂತಿ ಯನ್ನುಂಟುಮಾಡಿತು. ಅದರ ಪರಿಣಾಮವಾಗಿ ಅವಳಿಗೆ ಊಟ, ಉಡಿಗೆಗಳ ಮೇಲೆ ಪರಿವೆಯಿಲ್ಲದಾಯಿತು, ಯಾವ ಉಳಿದ ವಸ್ತುಗಳ ಮೇಲೂ ಉತ್ಸಾಹವಿಲ್ಲದಾಯಿತು; ಯಾವಾಗಲೂ ಆ ಚಿತ್ರಪಟವನ್ನೇ ನೋಡುತ್ತ ಕುಳಿತಳು. ಕ್ಷಣಹೊತ್ತು ನಗುವಳು, ಆ ಮೇಲೆ ಮುಖ ವನ್ನು ಗಂಟುಹಾಕುವಳು. ಹೀಗೆ ಅವಳಲ್ಲಿ ಹುಚ್ಚು ವಿಕಾರವು ತೋರ ಹತ್ತಿತು. ಅವಳ ಹಾವಭಾವಗಳನ್ನರಿತ ಆವಳ ತಾಯಿಯು ಗಾಬರಿ ಯಾದಳು. ಸಂಜೆಗೆ ಮನೆಗೆ ಬಂದ ವಿಠ್ಠಲದಾಸನಿಗೆ ಈ ಸಂಗತಿಯು ಗೊತ್ತಾಯಿತು. ಮಗಳ ಮೇಜಿನ ಮೇಲಿದ್ದ ಚಿತ್ರಪಟವನ್ನು ನೋಡಿ ಅವನ ಮನಸ್ಸಿನಲ್ಲಿ ವಿಪರೀತ ಕಲ್ಪನೆಗಳ ತೆರೆಗಳು ಅಲೆದಾಡಹತ್ತಿದವು. ಈ ಮೊದಲು ತನ್ನ ಮಗಳಿಗೆ ವರನಾಗಿ ಸೂಚನೆ ಮಾಡಲ್ಪಟ್ಟ ದುರಂಧರನ ಚಿತ್ರಪಟವು ಅದಾಗಿತ್ತು. ತಾನು ಆ ಸೂಚನೆಯನ್ನು

ನಿರಾಕರಿಸಿದ್ದರಿಂದ ಅವನು ಮಾಟ, ಮಂತ್ರಗಳ ಸಾಧನೆಗಳನ್ನು ಪ್ರಯೋಗ ಮಾಡಿರುವನೋ ಹೇಗೆಂಬ ವಿಚಾರವು ಅವನಿಗೆ ಹೊಳೆಯಿತು.

ಆಗ ವಿಠ್ಠಲದಾಸನು ಕೋಣೆಯಲ್ಲಿ ಸೂಕ್ಷ್ಮವಾದ ಶೋಧೆಯನ್ನು ಮಾಡಲಾರಂಭಿಸಿದನು. ಮಾಧುರಿಯು ಕುಳಿತುಕೊಂಡ ಖುರ್ಚಿಯ ಕಾಲಿಗೆ ಕಟ್ಟಿದ ಒಂದು ತಾಯತವು ಕಂಡಿತು. ಅದನ್ನು ನೋಡಿದೊಡನೆ ವಿಠ್ಠಲದಾಸನ ಊಹೆಯು ನಿಜವಾಯಿತು. ಆದರೆ ಇವೆಲ್ಲ ಕೃತಿಗಳು ಜರುಗಬೇಕಾದರೆ ಮನೆಯ ಸೇವಕರ ಸಹಾಯವಿಲ್ಲದೆ ಹೊರಗಿನವರು ಸಾಧಿಸಲು ಶಕ್ಯವಾಗಲಾರದೆಂದೂ, ಸೇವಕರಿಂದ ಗುಟ್ಟನ್ನು ಹೇಗಾದರೂ ಹೊರಪಡಿಸಬೇಕೆಂದೂ ಅವನು ನಿರ್ಧರಿಸಿದನು. ಹೀಗೆ ಆಲೋಚಿಸುತ್ತ ವಿಠ್ಠಲದಾಸನು ಆರಾಮ ಖುರ್ಚಿಯಲ್ಲಿ ಒರಗಿಕುಳಿತಿರಲು ಓರ್ವ ಸೇವಕಳು ಚಹಾದ ಬಟ್ಟಲವನ್ನು ತಂದು ಕೈಚಾಚಿ ಅವನೆದುರಿಗಿಟ್ಟಳು. ಆಗ ಅವಳ ಮುಂಗೈಗಳಲ್ಲಿ ಮಿರುಗುವ ಬಂಗಾರ ಬಳೆಗಳು ಒಮ್ಮೆಲೇ ಅವನ ನೋಟವನ್ನು ಆಕರ್ಷಿಸಿದವು. ಈವರೆಗೆ ಯಾವ ಆಭರಣಗಳೂ ಇಲ್ಲದ ದಾಸಿಯು ಇವುಗಳನ್ನು ಹೇಗೆ ದೊರಕಿಸಿದಳೆಂಬದು ಅವನಿಗೆ ದಿಗಿಲುಬಿದ್ದಿತು. ಆಗ ಅವನು ಅವಳನ್ನು ಕುರಿತು, "ಇದೇನು, ಈ ಬಳೆಗಳನ್ನು ನಿನಗೆ ಯಾರು ಮಾಡಿಸಿಕೊಟ್ಟರು? ಎಷ್ಟು ಚಂದ ಕಾಣಿಸುತ್ತವೆಯಲ್ಲ!" ಎಂದು ಮುಂತಾಗಿ ರಮಿಸಿ ಕೇಳಹತ್ತಿದನು. ಆಗ ದಾಸಿಯು ಭಯಪಟ್ಟು ಒಮ್ಮೆಲೇ ಉತ್ತರಕೊಡದೆ, ತೊದಲಿಸುತ್ತ "ಸ್ವಾಮಿ, ನನ್ನ ಯಜಮಾನ ಮಾಡಿಸಿಕೊಟ್ಟಾನ, ಬಹಳ ದಿವಸದಿಂದ ಹಟಹಿಡಿದಿದ್ದೆ, ಆತ ಈವರೆಗೆ ದುಡಿದು ಕೂಡಿಟ್ಟ ಹಣದಿಂದ ಮಾಡಿಸ್ಯಾನ ಧನೇರ!" ಎಂದು ಉತ್ತರಕೊಟ್ಟಳು.

ವಿಠ್ಠಲದಾಸ—ನಿನ್ನ ಗಂಡ ಯಾವ ಉದ್ಯೋಗ ಮಾಡುತ್ತಾನೆ?

ದಾಸಿ—ಸ್ವಾಮಿ, ಆತ ಮುನಸಿಪಾಲಿಟಿಯಲ್ಲಿ ಶಿಪಾಯಿ ಇದ್ದಾನೆ.

ವಿಠ್ಠಲದಾಸ—ಅವನಿಗೆ ತಿಂಗಳಿಗೆ ಎಷ್ಟು ಸಂಬಳ ಸಿಗುವದು?

ದಾಸಿ—ತಿಂಗಳಿಗೆ ಮೂವತ್ತು ರೂಪಾಯಿಗಳು.

ವಿ—ನಿಮಗೆ ಎಷ್ಟು ಮಂದಿ ಮಕ್ಕಳಿರುವರು?

ದಾಸಿ—ಐದು ಜನರು.

ವಿ— ನಿನ್ನ ಗಂಡನ ಹೆಸರೇನು?

ದಾಸಿ—ನಿಮ್ಮ ಕುದುರೆಯ ಸೇವಕನಿದ್ದಾನಲ್ಲ ಅವನ ಹೆಸರೂ ನನ್ನ ಯಜಮಾನನ ಹೆಸರೂ ಒಂದೇ ಸ್ವಾಮಿ.

ವಿ—ನಾಮದೇವ, ಹೌದೇನು?

ದಾಸಿ—ಹೌದು ಸ್ವಾಮಿ.

ವಿಠ್ಠಲದಾಸನು ಇಷ್ಟು ಸಂಗತಿಯನ್ನು ವಿಚಾರಿಸಿಕೊಂಡು ಸುಮ್ಮನೆ ಕುಳಿತು ಮಧ್ಯಾನ್ಹಕ್ಕೆ ತನ್ನ ಸೇವಕನೊಬ್ಬನನ್ನು ಕರೆದು ದಾಸಿಯ ಗಂಡನಿಗೆ ಕರೆಕಳಿಸಿದನು. ಸೇವಕನು ನಾಮದೇವನನ್ನು ಕರೆದುಕೊಂಡು ಬಂದು ವಿಠ್ಠಲದಾಸನಿಗೆ ಭೆಟ್ಟಿ ಮಾಡಿಸಿದನು. ವಿಠ್ಠಲ ದಾಸನು ಅವನನ್ನು ವಿನಯದಿಂದ ಕರೆದು ಕುಳ್ಳಿರಿಸಿಕೊಂಡನು. ಅವನ ಕ್ಷೇಮ ಸಮಾಚಾರಗಳನ್ನು ಕೇಳುತ್ತ ಕೇಳುತ್ತ ಅವನ ಸಂಬಳ ಹಾಗು ಮನೆಯ ಖರ್ಚು ಎಷ್ಟೆಂಬದರ ಬಗ್ಗೆ ಪ್ರಸ್ತಾಪವೆತ್ತಿದನು. ಆಗ ನಾಮ ದೇವನು, "ಏನು ಸ್ವಾಮಿ, ನನ್ನ ಸಂಬಳದಲ್ಲಿ ನನ್ನ ಸಂಸಾರ ಸಾಗಿಸು ವದು ಬಹು ಕಷ್ಟವಾಗಿದೆ. ಸಂಬಳವು ಊಟ, ಉಡಿಗೆಗಳ ಖರ್ಚಿಗೆ ಸಾಲುವದಿಲ್ಲ. ನನಗೂ ನನ್ನ ಮಕ್ಕಳಿಗೂ ಬಟ್ಟೆಬರೆಗಳಿಲ್ಲದೆ ಹರಕು ಬಟ್ಟೆಗಳನ್ನು ಹಾಕಿಕೊಂಡು ಸಂಸಾರ ಸಾಗಿಸುತ್ತಿದ್ದೇನೆ." ಎಂದನು.

ವಿಠ್ಠಲದಾಸ—ಅದೇಕೋ, ನೀನು ಸಂಬಳದಲ್ಲಿ ಉಳಿತಾಯಮಾಡಿ ಹೆಂಡತಿಗೆ ಬಂಗಾರ ಬಳೆಗಳನ್ನು ಮಾಡಿಸಿರುವಿಯೆಂದು ಕೇಳಿದ್ದೇನೆ. ಹೌದೇನು?

ನಾಮದೇವ— (ಆಶ್ಚರ್ಯದಿಂದ) ಎಲ್ಲಿಂದ ಸಾಧ್ಯ ಸ್ವಾಮಿ, ನಿಮಗಾರು ಹೇಳಿದರು?

ಇಷ್ಟರಲ್ಲಿ ನಾಮದೇವನ ಹೆಂಡತಿಯು ವಿಠ್ಠಲದಾಸನನ್ನು ಊಟಕ್ಕೆ ಕರೆಯಲು ಬಂದಳು. ಆಗ ವಿಠ್ಠಲದಾಸನು ಅವಳನ್ನು ಕುರಿತು, "ಏನು, ನಿನ್ನ ಗಂಡನು ಬಳೆ ಮಾಡಿಸಿಕೊಟ್ಟಿದ್ದಾನೆಂದು ಸುಳ್ಳು ಹೇಳಿದಿ. ಈಗ ಅವನು ಸ್ವತಃ ತಾನು ಮಾಡಿಸಿಲ್ಲವೆಂದು ಹೇಳುತ್ತಾನೆ. ಇದರ ನಿಜ ಸಂಗತಿ ಹೇಳುವಿಯೋ ಇಲ್ಲೋ" ಎಂದು ಗದರಿಸಿದನು.

ಆಗ ದಾಸಿಯು ಭಯದಿಂದ ನಡಗುತ್ತ ನಿರುತ್ತರಳಾಗಿ ನಿಂತು ಕೊಂಡಳು. ವಿಠ್ಠಲದಾಸನು ಮತ್ತೆ "ನೀನು ನಿಜಸಂಗತಿ ಹೇಳಿದಲ್ಲಿ ನಿನ್ನ ಅಪರಾಧ ಕ್ಷಮೆಮಾಡುತ್ತೇನೆ. ಇಲ್ಲವಾದರೆ ನೀನು ಸೆರೆಮನೆಯನ್ನು ಕಾಣುವಿ" ಎಂದನು. ಆಗ ದಾಸಿಯು ಕಾವಲುಗಾರನು ತನಗೆ ಬಳೆಗಳನ್ನು ಕೊಟ್ಟನೆಂದೂ ಅದರಸಲುವಾಗಿ ಅವನು ಕೊಟ್ಟ ಭಸ್ಮದ ಮಾತ್ರೆಯನ್ನು ಚಹಾಪಾನದಲ್ಲಿ ಬೆರಸಿ ಮಾಧುರಿಗೆ ಕೊಟ್ಟೆನೆಂದೂ ಹೇಳಿದಳು.

ಇದನ್ನು ಕೇಳಿದೊಡನೆ ವಿಠ್ಠಲದಾಸನ ತಲೆ ತಿರುಗಿತು. ಆಗ ಅವನು ಕಾವಲುಗಾರನನ್ನು ತನ್ನೆಡೆಗೆ ಕರೆದು ನಿಜ ಸಂಗತಿಯನ್ನು ಹೇಳೆಂದು ಬೆದರಿಸಿದನು. ಕಾವಲುಗಾರನು ನಡುಗುತ್ತ ತನಗೊಬ್ಬನು ಸೆರೆಕುಡಿಸಿ ಆಭರಣಗಳ ಆಶೆಹಚ್ಚಿ ಭಸ್ಮ ಮಾತ್ರೆಯನ್ನು ಮಾಧುರಿಯ ಪಾನದಲ್ಲಿ ಹಾಕುವಂತೆ ಹಂಚಿಕೆಮಾಡಬೇಕೆಂದು ಹೇಳಿದ ಸಂಗತಿಯನ್ನು ವಿವರಿಸಿದನು. ವಿಠ್ಠಲದಾಸನು ದಾಸಿಯನ್ನೂ ಕಾವಲುಗಾರನನ್ನೂ ಆ ಕ್ಷಣದಲ್ಲಿಯೇ ಮನೆಯಿಂದ ಹೊರಗೆ ಹಾಕಿದನು. ಮುಂದೆ ಮಾಧುರಿಯ ಮನೋಭ್ರಾಂತಿಯನ್ನು ಹೇಗೆ ನಿವಾರಿಸಬೇಕೆಂಬ ವಿಚಾರವು ವಿಠ್ಠಲದಾಸನ ಮನಸ್ಸನ್ನು ಕದಲಿಸತೊಡಗಿತು.

## ಪ್ರಕರಣ ೧೨

# ಧರ್ಮದ ಸೋಗು

ಆದಿಕಾಲದಿಂದಲೂ ಮನುಷ್ಯನಿಗೆ ಸೃಷ್ಟಿಯ ಕರ್ತಾರನಲ್ಲಿ ನಂಬಿಗೆ. ಅವನು ಸರ್ವಶಕ್ತನೂ, ಸರ್ವಜ್ಞನೂ, ಸರ್ವಂತರ್ಯಾಮಿಯೂ, ಕರುಣಾಳುವೂ, ಸರ್ವರಕ್ಷಕನೂ ಇರುವನೆಂದು ಮಾನವನ ಭಾವನೆ. ಅವನು ನ್ಯಾಯಮೂರ್ತಿಯಿದ್ದು ಮನುಷ್ಯನ ಕೃತಿಗಳಿಗನು ಸಾರವಾದ ಫಲಗಳನ್ನು ಕೊಡುವನು. ಮನುಷ್ಯನು ಸತ್ಯ, ಪ್ರಮಾಣಿಕ

ತನದಿಂದ ವರ್ತಿಸಿ ಭಯ, ಭಕ್ತಿಗಳಿಂದ ತನಗೆ ಸದ್ಬುದ್ಧಿಯನ್ನು ಕೊಡಲು ಪ್ರಾರ್ಥಿಸಿಕೊಳ್ಳುವದು ನಿಜಧರ್ಮವೆನಿಸುವದು. ಆದರೆ ವ್ಯವಹಾರ ಧರ್ಮವೇ ಬೇರೆಯಾಗಿದೆ. ಜನರು ಸ್ವಾರ್ಥಸಾಧನೆಗಾಗಿ ಅನೇಕ ಪಾಪ ಕೆಲಸಗಳನ್ನು ಮಾಡಿ ಪಾಪ ನಿವಾರಣೆಮಾಡಿಕೊಳ್ಳಲು ಹದಿನೆಂಟು ದೇವರಿಗೆ ಹರಿಕೆ ಹೊತ್ತು ಹಣ್ಣು, ಕಾಯಿಗಳನ್ನು ಅರ್ಪಿಸುತ್ತಾರೆ, ಶತರುದ್ರ, ಸತ್ಯನಾರಾಯಣ ವ್ರತಗಳನ್ನು ನಡೆಯಿಸುತ್ತಾರೆ. ಈ ವ್ರತಗಳನ್ನು ನೆರವೇರಿಸಲು ಪುರೋಹಿತರೆಂಬ ಮಧ್ಯವರ್ತಿ ಜನರನ್ನು ನಿಯಮಿಸಿಕೊಳ್ಳುತ್ತಾರೆ. ಈ ಜನರು ಹೊಟ್ಟೆಹೊರಕೊಳ್ಳುವದಕ್ಕಾಗಿ ದೇವರ ಕೃಪೆಯನ್ನು ಒದಗಿಸಿಕೊಡುವೆವೆಂದು ಹುಚ್ಚು ಜನರ ಮನಸ್ಸಿನಲ್ಲಿ ಬೀಜ ಬಿತ್ತುವರು. ದೇವರು ಹಣ್ಣು, ಕಾಯಿ, ಹೋಮ, ಹವನ ಮುಂತಾದ ಲಂಚದ ಆಶೆಗೆ ಬಿದ್ದು ಪಾಪವನ್ನು ಪರಿಹಾರಮಾಡನು. ಹಾಗಾದಲ್ಲಿ ಅವನುಬಬ್ಬ ದೊಡ್ಡ ಲಂಚಗುಳಿಸರ್ವಾಧಿಕಾರಿಯಾಗುವನು.

ಸತ್ಯಮಾರ್ಗ ಇಲ್ಲವೆ ಅಸತ್ಯಮಾರ್ಗವನ್ನು ಅವಲಂಬಿಸಲು ಮನುಷ್ಯನಿಗೆ ಬುದ್ಧಿ ಸ್ವಾತಂತ್ರ್ಯವುಂಟು. ಮನುಷ್ಯನು ತನ್ನ ವರ್ತನೆಯ ಅನುಗುಣವಾಗಿ ತನ್ನ ಅದೃಷ್ಟವನ್ನು ರಚಿಸಿಕೊಳ್ಳುವನು. ವರ್ತನೆಗೆ ತಕ್ಕ ಫಲಗಳನ್ನು ಹೊಂದುವನು. ವರ್ತನೆಯ ಪರಿಣಾಮದ ಫಲಗಳನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅವುಗಳನ್ನು ಅನುಭವಿಸಿಯೇ ತೀರಬೇಕು ದೇವರಿಗೆ ಹಣ್ಣುಕಾಯಿಗಳನ್ನು ಅರ್ಪಿಸುವದಾಗಲಿ ಇಲ್ಲವೆ ಹೋಮ ಹವನಗಳಿಂದ ತೃಪ್ತಿಗೊಳಿಸುವದಾಗಲಿ ವ್ಯರ್ಥ ಪ್ರಯತ್ನವಾಗಿದೆ. ಈ ತಿಳುವಳಿಕೆಯು ಮಾನವನ ಮಾನಸಿಕ ದೌರ್ಬಲ್ಯದ ದ್ಯೋತಕವು ಈ ದೌರ್ಬಲ್ಯಕ್ಕೆ ಜೋತಿಷರೂ ಪುರೋಹಿತರೂ ಪುರಸ್ಕಾರ ಕೊಟ್ಟು ಜಾದುಗಾರಿಕೆಯ ಜಾಲವನ್ನೊಡ್ಡುವರು. ಇವರು ತಾವೇ ಸ್ವತಃ ದಾರಿದ್ರ್ಯ, ದುಃಖ, ಅನಂತ ತೊಂದರೆಗಳಿಂದ ಬಳಲುತ್ತಿರುವಾಗ ತಮ್ಮ ಹೊಟ್ಟೆ ಹೊರೆದುಕೊಳ್ಳುವದಕ್ಕಾಗಿ ಜನರ ಕಷ್ಟಗಳನ್ನು ಪಾಪಗಳನ್ನೂ ನಿವಾರಣೆಮಾಡುವದಕ್ಕಾಗಿ ಉಪಾಯಗಳನ್ನು ಸೂಚಿಸುತ್ತಾರೆ.

ಇಂತಹ ಜಾದುಗಾರರ ಸಮೂಹವು ಎಲ್ಲ ಕಡೆಗಳಲ್ಲಿ ಕಾಣಬರುವದು. ಪುಣೆಯಲ್ಲಿ ತುಳಸೀಬಾಗವೆಂಬದೊಂದು ವಿಶಾಲವಾದ ದೇವಾ

ಲಯದ ಪಟಾಂಗಣವುಂಟು. ಅಲ್ಲಿ ಜೋತಿಷರು, ಪುರಾಣಿಕರು, ಪುರೋಹಿತರು, ಸಾಮುದ್ರಿಕರು, ಯಾಂತ್ರಿಕರು, ಮಾಂತ್ರಿಕರು, ಧಾರ್ಮಿಕ ಡಾಂಭಿಕರು ತಳವೂರಿಕೊಂಡು ತಮ್ಮ ದುಡ್ಡಿನ ದುಡಿಮೆಯನ್ನು ನಿತ್ಯ ದಲ್ಲಿ ನೆರವೇರಿಸಿಕೊಳ್ಳುತ್ತಾರೆ. ಸಂಸಾರತಾಪದಿಂದ ಬಳಲುವ ಅನೇಕ ಮರುಳುಮಾನವರು ಅಲ್ಲಿಗೆ ತಮ್ಮ ಕಷ್ಟನಿವಾರಣೆಯ ಉಪಾಯಗಳನ್ನು ಅರಿತುಕೊಳ್ಳಲು ಬರುವರು. ಅಲ್ಲಿ ಹರಿಭಟ್ಟನೆಂಬವನು ದಿನಾಲೂ ಸಾಯಂಕಾಲ ಪುರಾಣವನ್ನು ಓದುವನು. ಅದನ್ನು ಕೇಳಲು ಮುದುಕರು ದೀರ್ಘಕಾಲ ಕೂಡ್ರುವರು. ಮುಪ್ಪಿನಿಂದ ಸಹಜವಾಗಿ ತಲೆನಡುಗುತ್ತಿರು ವಂಥವರು ಪುರಾಣಕೇಳುವಾಗ ತಲೆದೂಗುತ್ತಿರುವಂತೆ ಭಾಸವಾಗು ತ್ತಿತ್ತು. ಪುರಾಣಿಕನು ಗೊಡ್ಡು ಕತೆಗಳನ್ನು ಹೇಳುತ್ತಿದ್ದರೂ ಕಾಲ ಹರಣ ಮಾಡುವದಕ್ಕೆ ಅದೊಂದು ವ್ಯಾಸಂಗವಿದ್ದಂತಾಗಿತ್ತು. ಮುದುಕರು ಮನೆಯಲ್ಲಿ ಸುಮ್ಮನೆ ಕಾಲಕಳೆಯುವದು ಬೇಜಾರವೆನಿಸು ತ್ತಿತ್ತು. ಮನೆಯಲ್ಲಿ ಹೆಂಡರ, ಮಕ್ಕಳ, ಮೊಮ್ಮಕ್ಕಳ ಉಪದ್ರವನ್ನು ತಪ್ಪಿಸಿಕೊಳ್ಳುವದಕ್ಕೆ ಇದೊಂದು ಸುಲಭೋಪಾಯವಾಗಿತ್ತು. ಇದರ ಮೇಲೂ ಮನೆಯಲ್ಲಿ ಕುಳಿತರೆ ಸಂಸಾರತಾಪಗಳ ಚಿಂತೆಯ ನೆನಪು ಕ್ಷಣ ಕ್ಷಣಕ್ಕೆ ಕಳವಳವನ್ನುಂಟುಮಾಡುವದು. ಇವೆಲ್ಲ ಸಂತಾಪಗಳನ್ನು ತಪ್ಪಿಸಿಕೊಳ್ಳಲು ಅವರು ಪುರಾಣಕೇಳುವ ನೆವದಿಂದ ಅಲ್ಲಿಗೆ ಬರುವರು.

ತರುಣ ಮತ್ತು ಮುಪ್ಪಿನ ವಿಧವೆಯರು ನಸುಕಿನಲ್ಲಿದ್ದು ನೀರು ಸಾರಿಗೆ ಮಾಡಿ, ಕಸಕಡ್ಡಿಗಳನ್ನು ತೆಗೆದು, ಭಾಂಡಿಗಳನ್ನು ಬೆಳಗಿ, ನೆಲಸಾರಣೆ ಮುಂತಾದ ಶ್ರಮದ ಕೆಲಸಗಳನ್ನು ಸಾಯಂಕಾಲದವರೆಗೆ ಮಾಡಿ ಮನೆಯಲ್ಲಿ ಚಿಕ್ಕ ಮಕ್ಕಳನ್ನು ಎತ್ತಿಕೊಂಡು ತಿರುಗುವ ಭಾರವನ್ನು ತಪ್ಪಿಸಿಕೊಳ್ಳುವದಕ್ಕಾಗಿ ತುಳಸಿಭಾಗದ ಪುರಾಣ ಶ್ರವಣಕ್ಕೆ ಬರುವರು. ಬರುವಾಗ ಕೈಯಲ್ಲಿ ಅರಳಿಯನ್ನು ಹಿಡಿದುಕೊಂಡು ಬಂದು ಪುರಾಣ ಮುಗಿಯುವವರೆಗೆ ಬತ್ತಿಗಳನ್ನು ಹೊಸೆಯುತ್ತ ಕೂಡ್ರುವರು. ಆಗ ಅವರು ತಮ್ಮೊಳಗೆ ತಮ್ಮ ಗ್ರಹಕೃತ್ಯಗಳ ಛಿದ್ರಗಳನ್ನೂ, ತಮ್ಮ ಮಕ್ಕಳು, ಸೊಸೆಗಳು ತಮಗೆ ಕೊಡುವ ತೊಂದರೆಗಳನ್ನೂ ವಿವರಿಸಿ ಹೇಳಿ ತಮ್ಮ ಹೃದಯತಾಪವನ್ನು ವ್ಯಕ್ತಗೊಳಿಸುವರು. ಪುರಾಣಿಕನು

ಹೇಳುವದೇನೋ ಇವರು ಕೇಳುವದೇನೋ. ಪುರಾಣಿಕನು ರಾತ್ರಿ ಒಂಭತ್ತು ಘಂಟೆಯುವರೆಗೆ ಒಂದೇ ಸಮನಾಗಿ ಒದರಿಕೊಳ್ಳುವನು. ಪುರಾಣ ಮುಗಿಸುವಾಗ ಮಾತ್ರ ಜನರ ಮನಸ್ಸನ್ನು ಕರಗಿಸುವಂಥ ವಿಷಯ ಒಂದನ್ನು ಪ್ರತಿಪಾದಿಸುವನು. ಯಾಕೆಂದರೆ ಪುರಾಣ ಮುಕ್ತಾಯವಾದಾಗ ಪ್ರತಿಯೊಬ್ಬ ಕೇಳುವವನು ತನ್ನ ಶಕ್ತ್ಯಾನುಸಾರ ದಕ್ಷಿಣೆಕೊಡುವನು. ಆಗ ಪುರಾಣಿಕನು ಪ್ರಸೂತ ವೈರಾಗ್ಯ, ಸ್ಮಶಾನ ವೈರಾಗ್ಯ, ತ್ಯಾಗಬುದ್ಧಿಯ ವೈರಾಗ್ಯ, ಸರ್ವ ಪ್ರಾಣಿದಯಾ ವೈರಾಗ್ಯ ಮುಂತಾದ ವಿಷಯಗಳನ್ನು ತೆಗೆದುಕೊಂಡು ಕರುಣಾರಸವನ್ನು ಕಲ್ಪಿಸುವನು.

ಪುರಾಣಿಕನು ಅದನ್ನು ಕೇಳುವವರ ಮನಸ್ಸನ್ನು ಕರಗಿಸುವಂತೆ ಮೊದಲು ಒಂದು ತತ್ವದ ಮುದ್ದೆಯನ್ನು ಅವರ ಮುಂದೆ ಒಡ್ಡುವನು. "ಮರಣವು ಮನುಷ್ಯನಿಗೆ ನಿಶ್ಚಿತವು. ಮನುಷ್ಯನು ಒಂದಿಲ್ಲೊಂದು ದಿನ ಯಮನ ದವಡೆಯಲ್ಲಿ ಆಹುತಿಯಾಗಲೇಬೇಕು. ಜೀವಿಸಿರುವಾಗ ಮನುಷ್ಯನು ದುರಾಶೆಯಿಂದ ಹೊನ್ನು, ಹೆಣ್ಣು, ಮಣ್ಣು, ನನ್ನದು, ನನ್ನದೆಂದು ಗಳಿಕೆಮಾಡಿ, ಊಟ, ಉಡಿಗೆಗಳಿಗೆ ಸಹ ಸರಿಯಾಗಿ ಬಳಿಸದೆ ದುಡ್ಡನ್ನು ಬಚ್ಚಿಟ್ಟು ಸಾಯುವಾಗ ಹೆರರಿಗೆ ಬಿಟ್ಟುಹೋಗುವನು. ಸತ್ತಾಗ ಅವನ ಬಾಯಲ್ಲಿ ಮಣ್ಣುಮಾತ್ರ ಬೀಳುವದು. ಹೆಂಡಿರು, ಮಕ್ಕಳು, ಹಣ, ಹೊಲ ಮನೆಗಳಾವವೂ ಅವನ ಬೆಂಬಲವಾಗಿ ಬರುವದಿಲ್ಲ, ಅವನು ಜೀವಿಸಿರುವಾಗ ತಾನು ಪರರಿಗೆಕೊಟ್ಟ ದಾನ, ಪರೋಪಕಾರ ಸತ್ಯವರ್ತನೆ, ಧರ್ಮಕಾರ್ಯಗಳು ಮಾತ್ರ ಅವನನ್ನು ಹಿಂಬಾಲಿಸುವವು. ಅದೇ ಅವನಿಗೆ ಪರಲೋಕದಲ್ಲಿ ಸುಖವನ್ನುಂಟು ಮಾಡುವವು" ಹೀಗೆಂದು ಪುರಾಣಿಕನು ಹೇಳಿದಾಗ ಕೇಳುವವರಮನಸ್ಸು ಕರಗುವದು— ಅವರು ಕ್ಷಣಹೊತ್ತು ಸಂಸಾರತಾಪದಿಂದ ಮುಕ್ತರಾಗಿ ವೈರಾಗ್ಯಯುಕ್ತರಾಗುವರು. ಅದೇ ಸಮಯಕ್ಕೆ ಪುರಾಣಿಕನು ಮಂಗಲ ಸ್ತೋತ್ರ ಹೇಳುತ್ತ ಕರ್ಪುರ ದೀಪದ ತಾಟನ್ನು ಎತ್ತಿ ಹಿಡಿದು ನಿಲ್ಲುವನು. ಆಗ ಜನರು ಶಕ್ತ್ಯಾನುಸಾರ ತಾಟಿನಲ್ಲಿ ರೊಕ್ಕವನ್ನು ಝಣಕ್ ಝಣಕ್ಕೆಂದು ಹಾಕುವರು. ಈರೀತು. ೮—೧೦ ರೂಪಾಯಿಗಳು ಛಡ

ಜಿಗೆ ದೊರೆತವು. ಅವನ ದಿನದ ಕೂಲಿಯು ಸಾಕಷ್ಟು ಸಿಕ್ಕಿತು. ಪುರಾಣ ಕೇಳಿದವರ ಬೊಕ್ಕಣಗಳು ಬರಿದಾದವು. ಆದರೆ ಅವರು ಮನೆಗೆ ಹೋದೊಡನೆ ಸ್ಮಶಾನ ವೈರಾಗ್ಯ ಭಾವವನ್ನು ಮರೆತು ಮತ್ತೆ ತನ್ನ ಮನೆ, ತನ್ನ ಆಸ್ತಿಗಳೆಂಬ ಭಾವನೆಯಲ್ಲಿ ಆಸಕ್ತರಾಗುವರು.

ತುಳಸಿಬಾಗದ ಮತ್ತೊಂದೆಡೆಯಲ್ಲಿ ದತ್ತಾತ್ರಯ ಶಾಸ್ತ್ರಿ ಎಂಬವನು ಕೀರ್ತನವನ್ನು ಹೇಳುತ್ತಿದ್ದನು. ಅದನ್ನು ನೂರಾರು ಜನಭಾವಿಕರು ಕೇಳುತ್ತ ಕುಳಿತಿದ್ದರು. ಕೀರ್ತನಕಾರನು ತ್ಯಾಗದ ವಿಷಯವನ್ನು ಕುರಿತು ಹೇಳುತ್ತಿದ್ದನು. "ಮನುಷ್ಯನು ಗಳಿಸುವ ಹಣ, ಹೊಲ, ಮನೆಗಳು ಸ್ಥಿರವಲ್ಲ. ಮನುಷ್ಯನು ಸಾಯುವಾಗ ಅವು ಬೆಂಬತಿ ಬರುವದಿಲ್ಲ. ಮಕ್ಕಳುಮರಿಗಳಿಗಾದರೂ ಅವು ಬಹುಕಾಲ ನಿಲ್ಲುವೆದಿಲ್ಲ. ಅವರು ದುಂದುಗಾರರೂ ದುರ್ವ್ಯಸನಿಗಳೂ ಆದಲ್ಲಿ ಹಣವನ್ನು ಹಾಳು ಮಾಡುತ್ತಾರೆ, ಹೊಲ ಮನೆಗಳನ್ನು ಮಾರುತ್ತಾರೆ. ಆದುದರಿಂದ ತಾನು ಗಳಿಸಿದ ಹಣವನ್ನು ದಾನ, ಧರ್ಮಗಳಿಗಾಗಿ ಉಪಯೋಗಿಸಬೇಕು. ಸಾಧು, ಸಂತರು, ದರಿದ್ರರು, ಗುರುಗಳು ಪುರೋಹಿತರು ದಾನ ತೆಗೆದುಕೊಳ್ಳಲು ಪಾತ್ರರು. ಅವರನ್ನು ಯಥೇಚ್ಛವಾದ ದಾನದಿಂದ ತೃಪ್ತಿಪಡಿಸಬೇಕು. ದಾನ ಬೇಡಿದವರಿಗೆ ಇಲ್ಲೆಂದು ಹೇಳಿದವನಲ್ಲಿಯ ಹಣವು ಇಲ್ಲದಂತಾಗುವದು. ದಾನ ಮಾಡದವನಿಗೆ ನರಕ ಪ್ರಾಪ್ತಿಯಾಗುವದು. ಅಲ್ಲಿ ಅವನನ್ನು ನರಕಪಾಲಕರು ಬಿಸಿಯಾದ ಮರಳಿನ ಮೇಲೆ ನಿಲ್ಲಿಸುವರು, ಕಹಿಯಾದ ಕಾಯಿಗಳನ್ನು ತಿನ್ನಿಸುವರು, ತಲೆಯ ಮೇಲೆ ಭಾರವಾದ ಕಲ್ಲನ್ನು ಹೊರಿಸುವರು; ಇರುವೆಗಳ ಹುತ್ತದಲ್ಲಿ ಕೈಗಳನ್ನು ಹಾಕಿಸುವರು; ಮುಳ್ಳಿನ ದಾರಿಗಳಲ್ಲಿ ನಡೆಯಿಸುವರು. ಇಂತಹ ಯಾತನೆಗಳಿಗೆ ದಾನಿಯಲ್ಲದವನು ಗುರಿಯಾಗುವನು" ಎಂದು ಕೀರ್ತನಕಾರನು ನರಕದ ಭಯಾನಕವಾದ ಸ್ಥಿತಿಯನ್ನು ಚಿತ್ರಿಸಿದಾಗ ಕೇಳುವವರು ಭಯಪೂರಿತರಾಗಿ ತಮ್ಮಲ್ಲಿದ್ದ ಹಣವೆಲ್ಲವನ್ನು ಕೆಲವರು ಕೀರ್ತನಕಾರನ ತಾಟಿನಲ್ಲಿ ಹಾಕಿದರು. ಮತ್ತೆ ಕೆಲವರು ಬಂಗಾರದ ಉಂಗುರಗಳನ್ನೂ ಆಭರಣಗಳನ್ನೂ ಕಳಚಿ ತೆಗೆದು ತಾಟಿನಲ್ಲಿ ಬಿಸಾಕಿದರು. ಆಯಿತು ಕೀರ್ತನಕಾರನಿಗೆ ಬಹುಕಾಲದ ಬೇಟೆಯು!

ಅದೇ ಭಾಗದ ಒಂದು ಮೂಲೆಯಲ್ಲಿ ಧೋಂಡೋಪಂತನೆಂಬವನು ಪ್ರಶ್ನೆಯ ಹೊತ್ತಿಗೆಯೊಂದನ್ನಿಟ್ಟುಕೊಂಡು ಕುಳಿತಿದ್ದಾನೆ. ಅನೇಕ ಸಂಸಾರತಾಪಗಳಿಂದ ಬಳಲುವ ಮರುಳು ಜನರು ಅವನೊಡನೆ ಪ್ರಶ್ನೆ ಕೇಳಲು ಬರುತ್ತಿದ್ದರು. ದೆವ್ವ ಬಡಿದವರಿಗೆ, ತಲೆ ಕೆಟ್ಟವರಿಗೆ, ಸಣ್ಣ ಪುಟ್ಟ ಬೇನೆ ಬೇಸರಿಕೆಯುವರಿಗೆ ಪತ್ರ ಬರೆದುಕೊಡುತ್ತಿದ್ದನು. ಅವರ ಕಷ್ಟಪರಿಹಾರಕ್ಕಾಗಿ ಅವರಿಂದ ಹಣವನ್ನು ತೆಗೆದುಕೊಂಡು ಶಾಂತಿವ್ರತವನ್ನು ಮಾಡುವೆನೆಂದು ಹೇಳುತ್ತಿದ್ದನು. ಆದರೆ ನಿಜವಾಗಿ ವ್ರತವನ್ನೇ ಮಾಡುತ್ತಿರಲಿಲ್ಲ. ಅವನ ಹತ್ತಿರ ಒಬ್ಬ ಗೃಹಸ್ಥನು ಬಂದು ತಾನು ಅಕಸ್ಮಾತ್ತಾಗಿ ಒಂದು ಬೆಕ್ಕನ್ನು ಕಟ್ಟಿಗೆಯಿಂದ ಹೊಡೆಯಲು ಅದು ಸತ್ತಿತೆಂತಲೂ ಆ ಪಾಪಪರಿಹಾರ ಮಾಡಿಕೊಳ್ಳಲು ಉಪಾಯವೇನೆಂತಲೂ ಧೋಂಡೊಪಂತನನ್ನು ಕೇಳಿದನು.

ಆಗ ಧೊಂಡೋಪಂತನು ತನ್ನ ಹಳೆ ಹೊತ್ತಿಗೆಯನ್ನು ತೆರೆದು ನೋಡಿ ಕೈ ಬೆರಳುಗಳ ಮೇಲೆ ಎಣಿಕೆಮಾಡುತ್ತ ಒಂದು ಉಪಾಯವನ್ನು ಗೊತ್ತುಹಚ್ಚಿದಂತೆ ನಟಿಸಿ ಹತ್ತು ತೊಲೆಯ ಬಂಗಾರದ ಬೆಕ್ಕಿನ ಪ್ರತಿಮೆಯನ್ನು ಮಾಡಿಸಿ ದಾನಕೊಡಬೇಕೆಂದನು. ಆ ಗೃಹಸ್ತನು ಶ್ರೀಮಂತನೆಂಬದು ಪಂತನಿಗೆ ಅರಿಕೆಯಿತ್ತು. ಗೃಹಸ್ಥನಿಗೆ ಆ ವಿಧಾನವು ಭಾರವೆನಿಸದ್ದರಿಂದ ಮರುದಿನವೇ ಪ್ರತಿಮೆಯನ್ನು ಮಾಡಿಸಿ ಪಂತನಿಗೆ ದಾನಮಾಡಿದನು ದೆವ್ವ ಬಡಿದ ಹೆಣ್ಣು ಮಗಳೊಬ್ಬಳನ್ನು ಪಂತನ ಹತ್ತರ ಕರಕೊಂಡು ಬಂದಿರಲು ಅವಳಿಗೆ ಒಂದು ತಾಯತವನ್ನು ಪಂತನು ಕಟ್ಟಿದನು. ಅದರ ಸಲುವಾಗಿ ಒಂದು ಗೋವನ್ನು ದಾನವಾಗಿ ಸ್ವೀಕರಿಸಿದನು. ಇಂಥ ವಿಪತ್ತಿನ ಗಿರಾಕಿಗಳು ಅವನಲ್ಲಿ ಅನೇಕರು. ಅವರಲ್ಲಿ ಅನೇಕರಿಗೆ ಕಾಲಾನುಸಾರವಾಗಿಯೋ ಅಥವಾ ಸಹಜವಾಗಿಯೋ ಗುಣಮುಖವಾಯಿತು. ಅದರಿಂದ ಪಂತನ ಪ್ರತಾಪವು ಹರಡಲು ಕಾರಣವಾಯಿತು. ಇದು ಅವನ ಸುದೈವವೇ ಹೊರತು ಅವನ ಬುದ್ಧಿವಂತಿಕೆಯೇನೂ ಇರಲಿಲ್ಲ. ಅವನಿಗೆ ಓದಲು ಸಹ ಸರಿಯಾಗಿ ಬರುತ್ತಿರಲಿಲ್ಲ. ಅವನ ಹೊತ್ತಿಗೆಯಲ್ಲಾದರೂ ಯಾವ ಜೋತಿಷ ಅಥವಾ ಸಾಮುದ್ರಿಕ ಶಾಸ್ತ್ರದ ನಿಯಮಗಳಿರಲಿಲ್ಲ. ಅದರ ಪುಟಗಳಲ್ಲಿ ಅಡ್ಡ

ಉದ್ದ ಗೆರೆಗಳು ಮಾತ್ರವಿದ್ದವು. ಅವನಲ್ಲಿ ಕೇಳಬರುವವರು ಮರುಳರಾದ್ದುದರಿಂದ ಅವನ ಉದ್ಯೋಗವು ಸರಳವಾಗಿ ಸಾಗಿತ್ತು.

ಪಂತನ ಪ್ರಭಾವವು ಬೆಳೆದದ್ದು ಮಾಧುರಿಯ ತಾಯಿಯ ಕಿವಿಗೆ ಮುಟ್ಟಿತು. ಮಗಳು ಪ್ರಾಯದಲ್ಲಿ ಭ್ರಮೆಯಿಂದ ಬಳಲುತ್ತಿರುವದು ಅವಳಿಗೆ ವ್ಯಸನದ ವಿಷಯವಾಗಿತ್ತು. ಅವಳು ಹದಿನೆಂಟು ದೇವರಿಗೆ ಹರಿಕೆಹೊತ್ತು ನಡೆದುಕೊಂಡಿದ್ದರೂ ಮಗಳಿಗೆ ಯಾವ ರೀತಿಯಿಂದಲೂ ಗುಣವಾಗಲಿಲ್ಲ. ಆದುದರಿಂದ ಅವಳು ಪಂತನ ಬಳಿಗೆ ಮಗಳನ್ನು ಕರಕೊಂಡು ಬಂದಳು. ಹಣ್ಣು, ಕಾಯಿ ದಕ್ಷಿಣೆ ಮುಂತಾದ ಸಾಮಗ್ರಿಗಳನ್ನು ವಿಪುಲವಾಗಿ ತಂದು ಪಂತನ ಎದುರಿಗೆ ಇಟ್ಟಳು. ಅವುಗಳನ್ನು ನೋಡಿದ ಪಂತನ ಬಾಯಲ್ಲಿ ನೀರೊಡೆಯಿತು. ಅವರ ವೈಭವದ ಉಡಿಗೆ ತೊಡಿಗೆಗಳನ್ನು ನೋಡಿದೊಡನೆ ತನಗೆ ದೊಡ್ಡ ಬೇಟೆ ಸಿಕ್ಕಿತೆಂದು ಭಾವಿಸಿದನು. ಪಂತನು ಅವರ ಬಾಡಿದ ಮುಖಗಳನ್ನು ನೋಡಿ, “ಏನಮ್ಮಾ, ಕುಳಿತುಕೊಳ್ಳಿರಿ, ನಿಮಗೆ ಯಾವನೋ ಒಬ್ಬನ ಕುತ್ಸಿತ ಕ್ರಿಯೆಯಿಂದ ಬುದ್ಧಿಮಾಂದ್ಯವಾದಂತೆ ತೋರುವುದು, ಅಹುದೋ” ಎಂದು ಒಂದು ಮುಂಡಿಗೆಯ ಮಾತನ್ನು ಹೇಳಿದನು. ಆದನ್ನು ಕೇಳಿ ಮಾಧುರಿಯ ತಾಯಿಯು ಅಗಾಧಪಟ್ಟು ತಮಗೆ ಸಂಭವಿಸಿರುವ ಸಂಗತಿಯನ್ನು ಪಂತನು ಒಮ್ಮೆಲೇ ಹೇಳಿದನಲ್ಲಾ ಎಂದು ಮನಸ್ಸಿನಲ್ಲಿ ಅಂದುಕೊಂಡಳು.

ಆಗ ಅವಳು, “ಪಂತರೇ, ತಾವು ಹೇಳಿದ ಮಾತು ನಿಜ. ಇಕೋ, ಇವಳು ನನ್ನ ಮಗಳು, ಯಾರೋ ಇವಳಿಗೆ ಚಹಾ ಪಾನದಲ್ಲಿ ಮದ್ದು ಬೆರೆಸಿ ಇವಳಿಗೆ ಭ್ರಾಂತಿಯನ್ನುಂಟುಮಾಡಿದ್ದಾರೆ ಇವಳಿಗೆ ಗುಣವಾಗುವಂತೆ ತಾವು ಮಾಡಿದಲ್ಲಿ ತಮಗೆ ಸಾಕಷ್ಟು ಸಂತೃಪ್ತಿಯನ್ನು ಮಾಡುವೆ”. ಎಂದು ಹೇಳಿದಳು. ಆಗ ಪಂತನ ಆಸಂದವು ಉಕ್ಕೇರಿತು.

ಪಂತ—ಒಳ್ಳೇದು, ನಾನು ಹೇಳಿದಂತೆ ಮಾಡುವಿರಾ?

ಮಾಧುರಿಯ ತಾಯಿ—ಸ್ವಾಮಿ, ಮೊದಲೇ ಹೇಳಿದ್ದೇನೆ. ನೀವು ಹೇಳಿದ್ದನ್ನೆಲ್ಲ ತಪ್ಪದೆ ನೆರವೇರಿಸುವೆ.

ಪಂತ—ಹಾಗಾದರೆ ಇಪ್ಪತ್ತು ತೊಲೆ ತೂಕದ ಬಂಗಾರದ ಗೋವನ್ನು ಮಾಡಿಸಿಕೊಂಡು ತಂದುಕೊಡಿರಿ. ಒಂದು ತಾಯತವನ್ನು ಬರೆದಿಡುವೆ, ಇವತ್ತಿಗೆ ಐದು ದಿನಗಳಲ್ಲಿ ರವಿವಾರ ಮೂರು ಘಂಟೆಗೆ ಮಘಾನಕ್ಷತ್ರ ಕೂಡುವದು. ಆಗ ತಾಯತವನ್ನು ಕಟ್ಟುವೆ. ವೇಳೆಗೆ ತಪ್ಪದೆ ಬರಬೇಕು.

ತಾಯಿ—ಹಾಗೆಯೇ ಆಗಲಿ, ಪಂತರೇ.

ಮಾಧುರಿಯ ತಾಯಿಯು ಅಂದೇ ಬಂಗಾರವನ್ನು ಕೊಂಡು ಅಕ್ಕಸಾಲಿಗನಿಂದ ಗೋವಿನ ಪ್ರತಿಮೆಯನ್ನು ಮಾಡಿಸಿದಳು. ಗೊತ್ತುಪಡಿಸಿದ ಪ್ರಕಾರ ರವಿವಾರ ಪಂತನಲ್ಲಿಗೆ ಬಂದು ಅವನಿಗೆ ಪ್ರತಿಮೆಯನ್ನು ಸಲ್ಲಿಸಿದಳು. ಪಂತನು ಪರಮಾನಂದರಿಂದ ಅದನ್ನು ಸ್ವೀಕರಿಸಿ ತನ್ನ ಮುರುಕು ಪೆಟ್ಟಿಗೆಯಿಂದ ಒಂದು ತಾಯತವನ್ನು ತೆಗೆದು ಮಂತ್ರಪಠಿಸುವವನ ಹಾಗೆ ಗುಣುಗುಟ್ಟುತ್ತ ಅದನ್ನು ಮಾಧುರಿಯ ರಟ್ಟೆಗೆ ಕಟ್ಟಿದನು. ಆ ಮೇಲೆ ಅವರೀರ್ವರೂ ಪಂತನ ಅಪ್ಪಣೆಪಡೆದು ಮನೆಗೆ ಬಂದರು. ಮೂರು ನಾಲ್ಕು ತಿಂಗಳುಗಳು ಗತಿಸಿದರೂ ಮಾಧುರಿಯಲ್ಲಿ ಏನೂ ಬದಲಾವಣೆಯು ಕಾಣಲಿಲ್ಲ. ಮದ್ದಿನ ಪರಿಣಾಮವನ್ನು ಪರಿಹಾರಮಾಡಲು ತಾಯತ ಕಟ್ಟಿದರೆ ಏನಾಗಬೇಕು? ಬೇನೆಯಿರುವದೊಂದು ಔಷದ ಮತ್ತೊಂದು!

ಮಾಧುರಿಯ ತಂದೆಯು ಅನೇಕ ವೈದ್ಯರು ಹೇಳಿದ ಔಷಧಗಳನ್ನು ಮಗಳಿಗೆ ಕೊಡಿಸಿದ್ದನು. ಅದರಿಂದಲೂ ಯಾವ ಪರಿಣಾಮವೂ ಆಗಿರಲಿಲ್ಲ. ಒಂದಾನೊಂದುದಿನ ಪಂಜಾಬದ ಒಬ್ಬ ವೈದ್ಯನು ಬಂದನು. ಅವನು ಮಾಧುರಿಯನ್ನು ಪರೀಕ್ಷೆಮಾಡಿ ಆ ಭ್ರಾಂತಿಯು ಮದ್ದಿನಿಂದಾದದ್ದೆಂದು ತಿಳಿದು ಅದನ್ನು ಪ್ರತೀಕಾರಪಡಿಸುವ ಔಷಧವನ್ನು ಕೊಟ್ಟನು. ಐದು ದಿನಗಳಲ್ಲಿಯೇ ಆ ಔಷಧದ ಬಲದಿಂದ ಅವಳ ಭ್ರಾಂತಿಯು ಬಿಟ್ಟು ಹೋಯಿತು ಮೊದಲಿನಂತೆ ಅವಳು ಸಹಜ ಸ್ಥಿತಿಯನ್ನು ಹೊಂದಿದಳು.

ಪ್ರಕರಣ ೧೩

## ಮಾಧುರಿಯ ಅಪಹರಣ

ಧುರಂಧರನು ಮಾಧುರಿಯ ರೂಪಕ್ಕೆ ಮೋಹಿತನಾಗಿ ಆ ಚಿಂತೆಯಲ್ಲಿಯೇ ಕೊರಗ ಹತ್ತಿದ್ದನ್ನು ನಾವು ಈ ಮೊದಲು ಕಂಡಿದ್ದೇವೆ. ಆದರೆ ಅವನು ನಡೆಯಿಸಿದ ಎಲ್ಲ ಉಪಾಯಗಳು ನಿರರ್ಥಕವಾದವು ಮುಂದೆ ಮಾಡುವದೇನು? ಬಲಾತ್ಕಾರ ಪ್ರಯೋಗ ಮಾಡುವದೊಂದೇ ಅವನ ಕೊನೆಯ ಉಪಾಯವಾಗಿ ಉಳಿದಿತ್ತು. ಇದಾದರೂ ಸುಲಭವಾಗಿರಲಿಲ್ಲ, ಮಹಾ ಸಾಹಸದ ಕೆಲಸವಾಗಿತ್ತು. ಆದರೆ ದುಷ್ಟ ವಿಚಾರಿಗಳಿಗೆ ತಾತ್ಕಾಲಿಕ ಅನುಕೂಲಗಳು ಸಿದ್ಧಿಸುವವು. ದುರಂಧರನ ಸೇವಕನಾದ ಕಮಾಲನು ಕಾರಸ್ಥಾನದಲ್ಲಿ ಶಿಖರವನ್ನಿಟ್ಟವನು ಮಾಧುರಿಯು ಲಭಿಸದಿದ್ದರೆ ದುರಂಧರನು ಜೀವತ್ಯಾಗ ಮಾಡುವದು ಖಂಡಿತವೆಂದು ಕಮಾಲನಿಗೆ ಮನವರಿಕೆಯಾಯಿತು. ಬುದ್ಧಿವಾದವನ್ನು ಹೇಳಿ ದುರಂಧರನ ಭ್ರಮೆಯನ್ನು ಬಿಡಿಸಬೇಕೆಂಬ ಅವನ ಪ್ರಯತ್ನವು ವಿಫಲವಾಗಿತ್ತು. ದುರಂಧರನು ಬದುಕಿದ್ದರೆ ತನ್ನ ವೈಭವ, ವಿಲಾಸಗಳು ಸಹಜವಾಗಿ ಸಾಗುವವೆಂಬದೂ, ದುರಂಧರನು ಸತ್ತು ಹೋದಲ್ಲಿ ತಾನು ಸತ್ತ ಹಾಗೆಯೆಂಬದೂ ಅವನ ಚಿತ್ತಕ್ಕೆ ತಾಗಿತು. ಇದರ ಮೇಲೂ ಅವನಿಗೆ ದುರಂಧರನ ಪ್ರೇರಣೆ, ಒತ್ತಾಯಗಳು ಕ್ಷಣ ಕ್ಷಣಕ್ಕೂ ಆಗುತ್ತಿದ್ದವು.

ಕಮಾಲನು ಮಾಧುರಿಯನ್ನು ಬಲಾತ್ಕಾರದಿಂದ ಹರಣಮಾಡಲು ಹಂಚಿಕೆಗಳ ಪರಂಪರೆಯನ್ನು ತಲೆಯಲ್ಲಿ ಒಂದರ ತರುವಾಯ ಮತ್ತೊಂದನ್ನು ಚಲನ ಚಿತ್ರಗಳ ಪಟದಂತೆ ತಿರುಗಿಸಲಾರಂಭಿಸಿದನು. ಮಾಧುರಿಯ ಮಂದಿರವಾದರೋ ಒಂದು ಕೋಟೆಗೆ ಸಮಾನ. ಸುತ್ತಲೂ ಭದ್ರವಾದ ಅಪಾರ ಗೋಡೆ. ಮಹಾದ್ವಾರದಲ್ಲಿ ಕಾವಲುಗಾರರ ಬಿಚ್ಚುಗತ್ತಿಯ ಕಾವಲು, ಮಂದಿರದಲ್ಲಿ ಸೇವಕರ ಪರಿವಾರ; ಮಾಧುರಿಯು ಹೊರವಳಯದಲ್ಲಿ ಹಾಯುವವಳಲ್ಲ. ಜನಬಲ, ಮನೋಬಲ, ಸಾಹಸಗಳ ಸಾಧನಗಳಿಲ್ಲದೆ ಅವಳನ್ನು ಅಪಹರಿಸುವದು ಸಾಧ್ಯವಲ್ಲ.

ಇವೆಲ್ಲ ಅಡಚಣೆಗಳನ್ನು ದೂರಮಾಡಲು ಅವನು ಆಳವಾಗಿ ಆಲೋಚಿಸ ಹತ್ತಿದನು.

ವಿಠ್ಠಲದಾಸನ ಮಂದಿರದಲ್ಲಿಯ ಮೊದಲಿನ ಕಾವಲುಗಾರರು ಕೆಲಸದಿಂದ ತಳ್ಳಲ್ಪಟ್ಟಿದ್ದರು. ಅವರ ಸ್ಥಳದಲ್ಲಿ ಇಬ್ಬರು ಹೊಸ ತರುಣರು ನಿಯಮಿಸಲ್ಪಟ್ಟಿದ್ದರು. ಅವರು ದೇಹದಿಂದ ಕೊಬ್ಬಿದವರೂ, ಉತ್ಸಾಹದಿಂದ ಉಬ್ಬಿದವರೂ, ಹುಲಿಗಳಂತೆ ಹುರುಪುಳಿಸುವವರೂ, ಕರ್ತವ್ಯದಕ್ಷತೆಯಲ್ಲಿ ಕುಶಲರೂ ಆಗಿದ್ದರು. ಅವರನ್ನು ಒಲಿಸಿಕೊಳ್ಳು ವದು ಬಿಕ್ಕಟ್ಟಿನ ಕೆಲಸವಾಗಿತ್ತು ಆದರೆ ಧನ, ಅನ್ನಪಾನಗಳ ಆಶೆಗೆ ಒಲಿಬೀಳದವರಾರು? ಕಮಾಲನು ತಿಂಡಿ, ತಿನಸು, ಪಾನ ವಸ್ತುಗಳನ್ನು ತೆಗೆದುಕೊಂಡು ಸೂರ್ಯಾಸ್ತಕಾಲದ ಮುಬ್ಬುಗತ್ತಲೆಯಲ್ಲಿ ವಿಠ್ಠಲದಾಸನ ಮನೆಗೆ ಹೊರಟನು. ಕಾವಲುಗಾರರು ಯಮದೂತರಂತೆ ಶಸ್ತ್ರ ಧಾರಿಗಳಾಗಿ "ಹುಷಾರ್, ಹುಷಾರ್" ಎಂದು ಕೂಗುತ್ತಿರುವರು. ಅದನ್ನು ಕೇಳಿ ಕಮಾಲನ ಎದೆಯು ಹಾರಹತ್ತಿತು. ಆದರೂ ಅವನು ಧೈರ್ಯ ತಂದುಕೊಂಡು ಕಾವಲುಗಾರರಿಗೆ ಸಂಶಯಬಾರದಂತೆ ಒಬ್ಬ ವೈದ್ಯನ ಸೋಗು ಹಾಕಬೇಕೆಂದು ನಿರ್ಧರಿಸಿದನು. ಅವನಿಗೆ ಕೆಲ ಕಾಲದಿಂದ ಸಂದುವಾತದ ಬೇನೆಯಿದ್ದುದರಿಂದ ಅದರ ಉಪಚಾರಕ್ಕಾಗಿ ಯಾವಾಗಲೂ ಔಷಧದ ನಾಲ್ಕೈದು ಸೀಸೆಗಳನ್ನಿಟ್ಟುಕೊಂಡಿರುತ್ತಿದ್ದನು. ಕಾವಲುಗಾರರು ಜಾಗ್ರತರಾಗಿರುವದನ್ನು ಕಂಡು ಅವನು "ಸಂದು ಬೇನೆಗೆ ವೈದ್ಯ, ಹೊಟ್ಟೆನೋವಿಗೆ ವೈದ್ಯ, ಮೇಹರೋಗಕ್ಕೆ ವೈದ್ಯ" ಎಂದು ಕೂಗುತ್ತ ಮಹಾದ್ವಾರದ ಎದುರಿನಲ್ಲಿ ಅತ್ತಿತ್ತ ಅಡ್ಡಾಡ ಹತ್ತಿದನು.

ಈ ಕೂಗನ್ನು ಕೇಳಿದೊಡನೆ ಕಾವಲುಗಾರರ ಕಿವಿಗಳು ಅತ್ತ ತಿರುಗಿದವು. ಅವರಲ್ಲಿ ಒಬ್ಬನಿಗೆ ಸಂದುನೋವು ಮತ್ತೊಬ್ಬನಿಗೆ ಹೊಟ್ಟೆ ನೋವಿನ ಸಂತಾಪವಿತ್ತು. ಅವರು ಕಮಾಲನನ್ನು ಹತ್ತಿರಕರೆದು ಕುಳ್ಳಿರಿಸಿಕೊಂಡರು ಕಮಾಲನು ತಾನು ಬಗದಾದ ಪಟ್ಟಣದವನೆಂದೂ ಹಿಮಾಲಯದಲ್ಲಿಯ ಗಿಡಮೂಲಿಕೆಗಳಿಂದ ಔಷಧ ಸಿದ್ಧಪಡಿಸಲು ಕೆಲವು ವರ್ಷಗಳ ಹಿಂದೆ ಹಿಂದುಸ್ಥಾನಕ್ಕೆ ಬಂದೆನೆಂದೂ ಮತ್ತು ಕಾಶ್ಮೀರದ

ರಾಜನಿಗೆ ಸಂಧುವಾತವನ್ನು ಕಳೆದದ್ದರಿಂದ ಆ ರಾಜನು ತನಗೊಂದು ವಜ್ರದ ಉಂಗುರವನ್ನು ಕೊಟ್ಟಿರುವನೆಂದೂ ಹೇಳಿ ತನ್ನ ವೈದ್ಯ ಪಾಂಡಿತ್ಯದ ವರ್ಣನೆಮಾಡಿಕೊಂಡನು. ಆ ಮೇಲೆ ಕಾವಲುಗಾರ ನೊಬ್ಬನು ತನಗೆ ಸಂಧುವಾತವಿರುವದನ್ನು ಹೇಳಿ ಔಷಧ ಹಚ್ಚಲು ಕಮಾಲನಿಗೆ ಕೇಳಿಕೊಂಡನು. ಕಮಾಲನಿಗೆ ಇದೊಂದು ಉತ್ತಮ ಸಂಧಿಯುಂಟಾಯಿತು. ಅವನು ತನ್ನಲ್ಲಿದ್ದ ಸೀಸೆಯನ್ನು ತೆಗೆದು ಅದರಲ್ಲಿಯ ಔಷಧವನ್ನು ಕಾವಲುಗಾರನ ಕೈಕಾಲುಗಳ ಸಂಧುಗಳಿಗೆ ಹಚ್ಚಿ ತಿಕ್ಕಿದನು. ಐದಾರು ನಿಮಿಷಗಳಲ್ಲಿ ಬಿಗಿದ ನರಗಳು ಸಡಿಲಾಗಿ ದೇಹದಲ್ಲಿ ಹುರುಪು, ಚಟವಟಿಕೆಗಳು ತಲೆದೋರಿದವು. ಆಗ ಕಾವಲು ಗಾರನು ಕಮಾಲನನ್ನು ಬಹು ಕೊಂಡಾಡಿದನು.

ಇನ್ನೊಬ್ಬ ಕಾವಲುಗಾರನು ತನಗೆ ಹೊಟ್ಟೆನೋವಿನಿಂದ ಆಗಾಗ್ಗೆ ಸಂತಾಪವಾಗುವದೆಂದು ಹೇಳಿದ್ದರಿಂದ ಕಮಾಲನು ಮರುದಿನ ಔಷಧ ಕೊಡುವೆನೆಂದು ಅವನಿಗೆ ಹೇಳಿದನು. ಆ ಮೇಲೆ ತಾನು ತಂದಿದ್ದ ತಿಂಡಿಗಳನ್ನು ಬಿಚ್ಚಿ ಕಮಾಲನು ಅವರಿಗೆ ತಿನ್ನಲು ಕೊಟ್ಟನು. ನಂತರ ಸೀಸೆಯೊಳಗಿನ ಸೆರೆಯನ್ನು ತೆಗೆದು ಬಟ್ಟಲುಗಳಲ್ಲಿ ಹಾಕಿ ಕಾವಲು ಗಾರರಿಗೆ ಕುಡಿಯಲು ಕೊಟ್ಟನು. ಅಂಥ ಉತ್ತಮವಾದ ಸೆರೆಯನ್ನು ಅವರು ಎಂದೂ ಕುಡಿದಿರಲಿಲ್ಲ. ಅವರು ಕುಡಿಯುತ್ತಿದ್ದುದು ಈ ಚಲಮರದ ಹೆಂಡ. ಸೆರೆಕುಡಿದ ಐದು ನಿಮಿಷಗಳಲ್ಲಿಯೇ ಅವರಿಗೆ ನಿಶೆಯ ಮದವುಂಟಾಯಿತು. ಅದರ ಪರಿಣಾಮದಿಂದ ಅವರಿಗೆ ತೂಕಡಿಕೆಯುಂಟಾಗಿ ಅಲ್ಪವೇಳೆಯಲ್ಲಿ ಗೊರ್, ಗೊರ್ ಎಂದು ಗೊರಿಕೆಹಾಕ ಹತ್ತಿದರು. ಇದನ್ನು ಕಂಡು ಕಮಾಲನು ಅವರನ್ನು ಒಲಿಸಿಕೊಳ್ಳಲು ಸಾಧಿಸಿತೆಂದು ಅಲ್ಲಿಂದ ಕೂಡಲೇ ಹೊರಟು ಮನೆಗೆ ಬಂದನು. ಕಮಾಲನ ದಾರಿ ಕಾಯುತ್ತ ಕುಳಿತ ದುರಂಧರನು ಕಮಾಲನ ಹರ್ಷಿತ ಮುಖವನ್ನು ಕಂಡು "ನಿನ್ನ ಕೆಲಸ ಕೈಗೂಡಿರುವಂತೆ ಕಾಣುವದು, ಇಲ್ಲವೋ?" ಎಂದು ಕೇಳಿದನು.

ಕಮಾಲ—ಒಡೆಯನೇ, ನಾನು ಕೈಕೊಂಡ ಕೆಲಸದಲ್ಲಿ ಹೈಗೈ ಮಾಡುವದಿಲ್ಲ. ಈಗ ಭೂಮಿಯನ್ನು ಹಸನು ಮಾಡುವದರಲ್ಲಿ ಜಯ

ಶಾಲಿಯಾಗಿದ್ದೇನೆ. ಬೀಜ ಬಿತ್ತಿ ಫಲಪಡೆಯುವದು ಮಾತ್ರ ಉಳಿದಿದೆ.

ದುರಂಧರ– ಭೂಮಿಯ ಹಸನವೆಂದರೆ ಏನು ಮಾಡಿರುವೆ?

ಕಮಾಲ–ಹೊಸ ಕಾವಲುಗಾರರನ್ನು ಕೈವಶಮಾಡಿಕೊಂಡಿರುವೆ. ನಾವು ಮುಂದೆ ಮಾಡುವ ಕಾರ್ಯಕ್ಕೆ ಅಡ್ಡಿಯನ್ನುಂಟು ಮಾಡದಂತೆ ಅವರನ್ನು ನಾನು ಮುಚ್ಚಿನಲ್ಲಿ ಹಾಕುವ ಉಪಾಯವನ್ನು ಸಾಧಿಸಿಕೊಂಡಿರುವೆ.

ದುರಂಧರ–ಒಳಿತಾಯಿತು. ಮುಂದಿನ ಸಾಹಸಕ್ಕೆ ಉಪಾಯಗಳನ್ನು ಅನುಗೊಳಿಸು ನನ್ನ ಪ್ರಾಣವನ್ನು ಉಳಿಸುವದು ನಿನ್ನನ್ನೇ ಕೂಡಿದೆ.

ಕಮಾಲ–ಒಡೆಯನೇ, ಚಿಂತೆ ಬೇಡ, ನಾನೆಲ್ಲ ಉಪಾಯಗಳನ್ನು ಯೋಜಿಸುವೆ. ನೀನು ಮಾತ್ರ ಸ್ವಸ್ಥವಾಗಿರು.

ಹೀಗೆಂದು ಹೇಳಿ ಕಮಾಲನು ತನ್ನ ಹಳೆಗೆಳೆಯರ ಗುಂಪಿನ ಗಡಂಗದ ಕಡೆಗೆ ಹೊರಟನು. ಆ ಮನೆಯು ಪಟ್ಟಣದ ಕಡೆಯ ಭಾಗದ ಒಂದು ಸಂದಿಯಲ್ಲಿತ್ತು. ಅಲ್ಲಿ ಇಸ್ಪೀಟು ಆಡುವವರ, ಜೇಬು ಕತ್ತರಿಸುವವರ, ಸೆರೆ ಗುಡುಕರ, ಕೊಲೆಗಾರರ ಹೊರತು ಮತ್ತಾರೂ ಸುಳಿದಾಡುತ್ತಿರಲಿಲ್ಲ. ಅದೊಂದು ಮುರುಕ ಮನೆ. ಒಳಗೆಲ್ಲ ಕಸದ ಗುಂಪೆ, ಮೂಲೆಗಳಲ್ಲಿ ಸೇದಿ ಒಗೆದ ಬತ್ತಿಗಳ ತುಣುಕಿನ ಮೆದೆಗಳು, ಗಾಂಜಿಯ ಚಿಲುಮೆಗಳು ಗೋಡೆಯ ಹತ್ತರ ಸಾಲಾಗಿರುವವು. ಒಡೆದ ಸೆರೆಯ ಬಾಟ್ಲಿಗಳು ಮನೆಯ ಸುತ್ತಲೂ ಬಿದ್ದಿರುವವು. ತಿಂದು ಬಿಸಾಡಿದ ಕೋಳಿಯ ತತ್ತಿಗಳೂ, ಉಂಡು ಚಲ್ಲಿದ ಮಾಂಸದ ತುಂಡುಗಳೂ, ಎಲುವಿನ ಪಂಜರಗಳೂ ಸುಡುಗಾಡಿನ ರಣಗುಟ್ಟುವ ನೋಟವನ್ನು ತೋರುವಂತಿತ್ತು. ಅಲ್ಲಿ ಸೇರುವವರೆಲ್ಲರು ದುಷ್ಟರು, ಕಟುಕರು, ತಲೆಗೋಯಿಕರು, ಮೋಸಗಾರರು. ಅವರು ಎಂಥ ದುಷ್ಟ ಕೆಲಸ ಮಾಡಲು ಸಹ ಹಿಂಜರಿಯರು. ಅವರಲ್ಲಿ ಉಸ್ತಾದ, ವಾಘ ಎಂಬವರು ದುಷ್ಟ ಶಿಖಾಮಣಿಗಳು. ಉಸ್ತಾದನು ಆರು ಅಡಿಯ ಎತ್ತರದ ಭವ್ಯವಾದ ಆಳು, ಕುಡಿ ಮೀಸೆಯವನು, ವಿಶಾಲವಾದ ಕಣ್ಣುಳ್ಳವನು, ಸರಳ

ವಾದ ಮೂಗುಳ್ಳವನು, ಅಗಲವಾದ ಹಣೆ, ತುಂಬಿ ತುಳುಕುವ ಗಲ್ಲ, ಹಳದಿಯ ಮೈಬಣ್ಣ, ಉಕ್ಕಿನ ಸಲಾಕೆಯ ರಟ್ಟೆ, ಕಂಭಗಳಂತಿರುವ ಕಾಲುಗಳುಳ್ಳವನು. ಅವನು ಸರದಾರನಂತೆ ಉದ್ದವಾದ ಪೇಡಾ ಸುತ್ತಿ ಕೊಳ್ಳುತ್ತಿದ್ದನು. ಆಕಾರದಲ್ಲಿ ಚಲುವನಾಗಿದ್ದರೂ ಕೃತಿಗಳಲ್ಲಿ ಕ್ರೂರ ನಾಗಿದ್ದನು ವಾಘನು ಎತ್ತರದಲ್ಲಿ ಸಾಧಾರಣ ಮಟ್ಟದವನಾದರೂ ದೇಹದಿಂದ ದಾಂಡಿಗನಾಗಿದ್ದನು. ಅವನು ಅಗಲವಾದ ಮುಖವುಳ್ಳ ವನು, ಅಂಡು ಮೂಗಿನವನು, ಸಣ್ಣ ಹಣೆ, ಚಂಡಿನಂತೆ ಉಬ್ಬಿದ ಗಲ್ಲ, ಗಡುತರವಾದ ತುಟಿಗಳುಳ್ಳವನು; ಮೈಬಣ್ಣ ಕಲ್ಲಿದ್ದಲಿಯಂತೆ ಕಪ್ಪಾ ದದ್ದು. ಕಿರಿದಾದ ಚಿವುಗಣ್ಣುಗಳು ಅವನ ಕ್ರೂರ ನೋಟವನ್ನು ವ್ಯಕ್ತ ಮಾಡುವವು. ಅವನ ಕಲ್ಲಿ ಮೀಸೆಗಳು ಗಲ್ಲಗಳ ಮೇಲೆ ಕಸಬ ರಿಕೆಗಳಂತೆ ಕಾಣುವವು. ತಲೆಯ ಮೇಲಿನ ಪಾಗೋಡಿಯು ಒಂದು ಜಲ್ಲಿಯಂತೆ ತೋರುತ್ತಿತ್ತು.

ವಾಘನು ಕುಸ್ತಿ ಆಡುವ ಜಟ್ಟಿಗಳಲ್ಲಿ ಮಿಕ್ಕಿದವನಾಗಿದ್ದನು. ಸಾಮಾನ್ಯವಾಗಿ ಅವನು ಎಂಟು ಜನರನ್ನು ಎದುರಿಸಿ ಅವರನ್ನು ಸದೆ ಬಡೆದು ಪಾರಾಗಿ ಹೋಗುವ ಶಕ್ತಿಯುಳ್ಳವನಾಗಿದ್ದನು. ಜೀವದ ಆಶೆ ಇಲ್ಲದೆ ಇರುವಷ್ಟು ಮುಂಗೋಪಿತನವು ಅವನಲ್ಲಿತ್ತು. ಬಲಾತ್ಕಾರದ ಅಪ ರಾಧಮಾಡುವಾಗ ಮುಂದಾಗುವ ದಂಡ ಶಿಕ್ಷೆಗಳ ಭಯವು ಅವನಿಗಿರ ಲಿಲ್ಲ ಎಂಟು ಹತ್ತು ಬಾರಿ ಸೆರೆಮನೆಯ ಸುಖವನ್ನು ಅನುಭವಿಸಿದ್ದನು. ನಿಜವಾಗಿಯೂ ಅವನು ರಾಕ್ಷಸನಾಗಿದ್ದನು ಅವನು ಉಸ್ತಾದನೊಡನೆ ಸೇರಿದಾಗ ಜನರನ್ನು ದಾರಿಯಲ್ಲಿ ತಡೆಗಟ್ಟಿ ಸುಲಿಗೆಮಾಡುತ್ತಿದ್ದನು. ಜನರು ತಾವಾಗಿ ಹಣಕೊಟ್ಟರೆ ಒಳಿತು, ಇಲ್ಲದಿದ್ದರೆ ಕಿರುಗತ್ತಿಯಿಂದ ಇರಿದು ಇಲ್ಲವೆ ಪಿಸ್ತೂಲಿನಿಂದ ಗುಂಡಿಕ್ಕಿ ಅವರನ್ನು ಪರಲೋಕಕ್ಕೆ ಕಳುಹಿಸುತ್ತಿದ್ದರು. ಕಮಾಲನು ಇವರನ್ನು ಆ ರಾತ್ರಿ ವಿಲಾಸದ ಗಡಂಗಿನಲ್ಲಿ ಭೇಟಿಯಾದನು. ರೊಕ್ಕದ ಆಟಕ ಭರಾಟೆ ನಡೆದಿತ್ತು. ಕಮಾಲನು ಅವರ ಸಂಗಡ ಕೆಲಹೊತ್ತು ರೊಕ್ಕ ಹಚ್ಚಿ ಮೂರೆಲೆಯ ಆಟವಾಡಿದನು ರಾತ್ರಿ ಹನ್ನೆರಡು ಗಂಟೆ ಬಾರಿಸಿದ ನಾದವು ಗೋಪುರದ ಗಡಿಯಾರದಿಂದ ಕೇಳಿಸಿತು. ಆಗ ಅವರು ಆಟವನ್ನು ನಿಲ್ಲಿಸಿದರು.

ಹಸಿವಾದುದರಿಂದ ಮನೆಗೆ ಹೋಗಬೇಕೆಂಬ ವಿಚಾರದಲ್ಲಿದ್ದರು. ಆಗ ಕಮಾಲನು ಉಸ್ತಾದ ಮತ್ತು ವಾಫರನ್ನು ಓರೆಗೆ ಕರೆದು ತನ್ನ ಒಡೆಯನ ಮನೆಯಲ್ಲಿ ಒಂದು ಮಹತ್ವದ ಕೆಲಸವಿರುವದೆಂದೂ ಅದಕ್ಕಾಗಿ ಅವರಿಬ್ಬರ ಸಹಾಯವು ಅವಶ್ಯವಿರುವದೆಂದೂ ಹೇಳಿದನು.

ಆದರೆ ಅವರು ಹಸಿವೆಯಿಂದ ಹಾವಿನಂತೆ ಚಡಪಡಿಸುತ್ತಿದ್ದುದರಿಂದ ಮನೆಗೆ ಹೋಗಿ ಊಟಮಾಡಬೇಕಾಗಿದೆ ಎಂದನು. ಕಮಾಲನು ಊಟದ ಚಿಂತೆ ಬೇಡ, ಸದ್ಯಕ್ಕೆ ಸಮೀಪದ ಕಾಫಿ ಗೃಹಕ್ಕೆ ಹೋಗೋಣವೆಂದು ಹೇಳಿ ತಾನು ಹತ್ತಿಕೊಂಡು ಬಂದ ತನ್ನ ಒಡೆಯನ ಕುದುರೆಯ ರಥದಲ್ಲಿ ಅವರನ್ನು ಕೂಡ್ರಿಸಿಕೊಂಡು ಫಲಾಹಾರ ಗೃಹಕ್ಕೆ ಬಂದರು. ಅಲ್ಲಿ ಅವರಿಗೆ ಯಥೇಚ್ಛವಾದ ಫಲಾಹಾರವನ್ನು ತಿನ್ನಿಸಿದನು. ಆ ಮೇಲೆ ಅವರ ಸಂಗಡ ರಥವನ್ನೇರಿ ಮೊದಲಿನ ಆಟದ ಗಡಂಗಕ್ಕೆಯೇ ಬಂದನು. ಆಗ ಅಲ್ಲಿ ಯಾರೂ ಇರಲಿಲ್ಲ. ಎಲ್ಲರೂ ಮನೆಗೆ ಹೋಗಿದ್ದರು. ಮೂಲೆಯ ಗೂಡಿನಲ್ಲಿ ಒಂದು ಕುರುಡು ದೀಪವು ಮಿನುಕುತ್ತಿತ್ತು. ಅಲ್ಲಲ್ಲಿ ನೆಲದ ಮೇಲೆ ಆಟಗರು ತಿಂದು ಚಲ್ಲಿದ ಫಲಾಹಾರದ ಚೂರುಗಳನ್ನು ತಿನ್ನುತ್ತ ಒಂದು ನಾಯಿಯು ನಿಂತುಕೊಂಡಿತ್ತು. ಕಮಾಲನು ನಾಯಿಯನ್ನು ಹೊರಗೆ ಓಡಿಸಿ ಬಾಗಿಲ ಕದವನ್ನು ಮುಚ್ಚಿದನು. ಆ ಮೇಲೆ ವಾಫ, ಉಸ್ತಾದರಿಗೆ ಅವನು ತನ್ನ ಒಡೆಯನ ಸಲುವಾಗಿ ಮಾಧುರಿಯೆಂಬ ತರುಣಿಯನ್ನು ದುಡುಕಿನಿಂದ ತರುವ ಸಾಹಸದ ಕೆಲಸವನ್ನು ವಿವರಿಸಿ ಹೇಳಿದನು ಅದರಲ್ಲಿ ಅವರ ಸಹಾಯಕ್ಕಾಗಿ ಪ್ರತಿಯೊಬ್ಬನಿಗೆ ಎರಡೆರಡು ಸಾವಿರ ರೂಪಾಯಿಗಳನ್ನು ಕೊಡಿಸುವೆನೆಂದು ವಚನಕೊಟ್ಟನು.

ಈ ಸಂಗತಿಯನ್ನು ಕೇಳಿದ ಅವರಿಬ್ಬರಿಗೆ ಹೊಸ ಬೇಟೆ ಸಿಕ್ಕಿತೆಂದು ಹರ್ಷವಾಯಿತು ಎಂಟು ಹತ್ತು ದಿನಗಳಿಂದ ಅವರಿಗೆ ಯಾವ ಬೇಟೆಯೂ ಸಿಕ್ಕಿರಲಿಲ್ಲ. ಆದುದರಿಂದ ಕಮಾಲನ ಸೂಚನೆಗೆ ಅವರು ಕೂಡಲೇ ಒಪ್ಪಿದರು. ಆ ಕೆಲಸವನ್ನು ನೆರವೇರಿಸಲು ಯಾವ ದಿನ ಗೊತ್ತು ಪಡಿಸಬೇಕೆಂಬದು ಕಮಾಲನ ಕೈಯಲ್ಲಿ ಉಳಿಯಿತು. ಕಮಾಲನು ತಾನು ನಿರ್ಧರಿಸಿದ ದಿನ ಸಹಾಯಕ್ಕೆ ಬರಬೇಕೆಂದು ಹೇಳಿ ಉಸ್ತಾದ ಮತ್ತು ವಾಫರಿಂದ ವಚನವನ್ನು ತೆಗೆದುಕೊಂಡನು. ಆ ಮೇಲೆ ಅವರು

ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಕಮಾಲನು ಮರುದಿನ ಸಂಜೆಗೆ ವಿಠ್ಠಲದಾಸನ ಮನೆಗೆ ಹೋದನು. ಅಲ್ಲಿ ಕಾವಲುಗಾರರ ಸಮೀಪ ಹೋದಾಗ ಅವರು ಅವನನ್ನು ಆದರದಿಂದ ಬರಮಾಡಿಕೊಂಡರು. ಮೊದಲಿನ ಭೆಟ್ಟಿಯಲ್ಲಿ ಹೇಳಿದಂತೆ ಇನ್ನೊಬ್ಬ ಕಾವಲುಗಾರನಿಗೆ ಹೊಟ್ಟೆ ನೋವಿನ ಔಷಧವನ್ನು ಕೊಟ್ಟನು. ಕಮಾಲನ ಉಪಕಾರಕ್ಕಾಗಿ ಅವರು ತಮ್ಮ ಆಭಾರವನ್ನು ವ್ಯಕ್ತಮಾಡಿದ್ದಲ್ಲದೆ ಅವನಿಗೆ ಯಾವ ಸಹಾಯ ವನ್ನಾದರೂ ಮಾಡುವೆವೆಂದರು. ಕಮಾಲನು ಅದೇ ಒಳ್ಳೇ ಸಮಯ ವೆಂದು ತಿಳಿದು ತನ್ನ ಗುಟ್ಟನ್ನು ಅವರಿಗೆ ತಿಳಿಸದೆ ತಾನು ಅವರಿಗೆ ಯಾವಾಗ ಏನಾದರೊಂದು ಕೆಲಸಮಾಡಲು ಹೇಳುವೆನೋ ಅದನ್ನು ಮಾಡಿದರೆ ಸಾಕೆಂದು ಗೌಣವಾಗಿ ಹೇಳಿದನು. ಕಾವಲುಗಾರರು ಹಾಗೆ ಮಾಡಲು ಪ್ರಮಾಣಪೂರ್ವಕವಾಗಿ ಒಪ್ಪಿದರು. ಕಮಾಲನು ಮೊದಲಿ ನಂತೆ ಅವರಿಗೆ ತಿಂಡಿಗಳನ್ನೂ ಸೆರೆಯನ್ನೂ ಕೊಟ್ಟನು. ಅವರು ಅದರಿಂದ ಕಮಾಲನ ಮೇಲೆ ಹೆಚ್ಚು ಪ್ರೇಮ ವಿಶ್ವಾಸಗಳುಳ್ಳವರಾದರು.

ಕಮಾಲನು ಮತ್ತೆ ಬರುವೆನೆಂದು ಅವರಿಗೆ ಹೇಳಿ ಹೊರಟನು. ಅವನು ಮುಂದಿನ ಸಿದ್ಧತೆಯನ್ನು ಮಾಡುವದು ಮಾತ್ರ ಉಳಿಯಿತು. ಮಾಧುರಿಯನ್ನು ಅಪಹರಿಸಲು ವಾಹನಗಳ ಅವಶ್ಯಕತೆ ಇತ್ತು. ದುರಂಧರನಲ್ಲಿ ಒಂದು ಉತ್ತಮವಾದ ಮೋಟರ ಇದ್ದಿತು. ಆದರೆ ಅದೊಂದೇ ಸಾಲದು. ಕಮಾಲನು ಮತ್ತೊಂದು ಹೊಸ ಬ್ಯೂಕ್ ಮೋಟರನ್ನು ತನ್ನ ಒಡೆಯನಿಂದ ಖರೀದಿಮಾಡಿಸಿದನು. ಮರುದಿನ ಸಂಜೆಯ ಐದು ಘಂಟೆಗೆ ಕಮಾಲನು ವಾಘ, ಉಸ್ತಾದರನ್ನು ಕರೆಯಿಸಿ ಕೊಂಡು ಅವರಿಗೆ ತೃಪ್ತಿಯಾಗುವಂತೆ ಊಟ ಮಾಡಿಸಿದನು. ಎರಡು ಮೋಟರುಗಳಿಗೆ ತುಂಬಾ ಪೆಟ್ರೋಲು ಎಣ್ಣೆ ತುಂಬಿಸಿ ವಾಹಕರಿಂದ ಅಣಿಗೊಳಿಸಿದನು. ಒಂದು ಮೋಟರಿನಲ್ಲಿ ದುರಂಧರನೂ ಒಬ್ಬ ದಾಸಿಯೂ ಕುಳಿತರು. ಇನ್ನೊಂದರಲ್ಲಿ ವಾಘ ಮತ್ತು ಉಸ್ತಾದರು ಕುಳಿತರು. ಕಮಾಲನು ಪೂರ್ವಸಿದ್ಧತೆಗಾಗಿ ವಿಠ್ಠಲದಾಸನ ಮನೆಗೆ ಮುಂದಾಗಿ ಹೊರಟನು. ಅವನು ಹೋಗುವಾಗ ದುರಂಧರನಿಗೆ ಅರ್ಧಘಂಟೆಯ ತರುವಾಯ ಹೊರಡಬೇಕೆಂತಲೂ ವಿಠ್ಠಲದಾಸನ ಮಂದಿರದ ಹೊರಗಿನ

ಬೀದಿಯಲ್ಲಿ ಮೋಟರುಗಳನ್ನು ನಿಲ್ಲಿಸಬೇಕೆಂತಲೂ ತಾನು ಸೀಟಿಯನ್ನು ಊದಿದಾಗ ಒಳಗೆ ಬರಬೇಕೆಂತಲೂ ಸೂಚನೆಕೊಟ್ಟು ಹೋಗಿದ್ದನು.

ಆಗ ಸೂರ್ಯನು ಪಶ್ಚಿಮದಿಕ್ಕಿನ ಪರ್ವತವನ್ನೇರಿ ಸಮುದ್ರದಲ್ಲಿ ಕ್ಷಣದಲ್ಲಿ ಧುಮುಕುವನೋ ಎಂದು ಕಾಣಿಸುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿ ಸಂಭವಿಸತಕ್ಕ ಅತ್ಯಾಚಾರವನ್ನು ನೋಡಬಾರದೆಂಬಂತೆ ಕೆಂಡದಂತೆ ಕೆಂಪು ಬಣ್ಣ ತಾಳಿ ಕೋಪ, ವಿಷಾದಗಳಿಂದ ತುಂಬಿದವನಂತೆ ಸೂರ್ಯನ ನೋಟವು ಗೋಚರವಾಗಿತ್ತು. ಅನ್ಯಾಯ ಸಂಭವಿಸುವದೆಂಬ ಕಳವಳ ದಿಂದ ಗಾಳಿಯು ಬಿರುಸಾಗಿ ಬೀಸತೊಡಗಿ ಎಲ್ಲಕಡೆಗಳಲ್ಲೂ ಧೂಳಿಯನ್ನು ಹರಡಿತು. ಗುಡುಗು ಮಿಂಚುಗಳು ಸಿಟ್ಟಿನಿಂದ ಖಡಲ್, ಖಡಲ್ ಎಂದು ಗರ್ಜಿಸಹತ್ತಿದವು ಆಕಾಶದಲ್ಲಿ ಜಿಟ್ಟಗಳಂತೆ ಕವಿದ ಕಪ್ಪು ಮೋ ಡಗಳು ದುಷ್ಟರನ್ನು ದಂಡಿಸುವ ದೂತರಂತೆ ಆಣೆಕಲ್ಲುಗಳ ಮಳೆಯನ್ನು ಸುರಿಸಹತ್ತಿದವು. ಸೃಷ್ಟಿಯ ಶಕ್ತಿಗಳೆಲ್ಲವೂ ಅನ್ಯಾಯಕ್ಕೆ ಅಸಂತುಷ್ಟವಾ ಗಿದ್ದವೋ ಎಂಬಂತೆ ತೋರಿತು. ಗುಡುಗು ಮಿಂಚುಗಳ ಅದ್ಭುತ ಏರಾ ಟಕೆಯಿದ್ದ ಮೂಲಕ ವಿದ್ಯುತ್ ದೀಪಗಳು ನೊಂದಿ ಹೋಗಿದ್ದವು. ಆದರೆ ಇವೆಲ್ಲ ಅಸಾಧಾರಣ ಮಳೆಗಾಳಿಗಳ ಏರಾಟವು ದುಷ್ಟಕಾರ್ಯಕ್ಕೆ ಒಂದು ರೀತಿಯಿಂದ ಸಹಾಯಕವೇ ಆಗಿದ್ದಿತು. ಅಸಹನವಾದ ಹವೆಯ ಮೂಲಕ ಆದಿನ ಸಾಯಂಕಾಲ ಜನರು ಮನೆಯಲ್ಲಿ ಅವಿತುಕೊಂಡು ಕುಳಿತರು. ಬೀದಿಗಳಲ್ಲಿ ಯಾರೂ ಅಲೆದಾಡುವವರಿರಲಿಲ್ಲ.

ಮೇಲೆ ಹೇಳಿದಂತೆ ಕಮಾಲನು ವಿಠ್ಠಲದಾಸನ ಮಂದಿರಕ್ಕೆ ಬಂದು ಕಾವಲುಗಾರರ ಕೋಣೆಯಲ್ಲಿ ಪ್ರವೇಶ ಮಾಡಿದನು. ಆಗ ಒಬ್ಬ ಕಾವಲುಗಾರನು ಹೊಟ್ಟೆ ನೋವಿನಿಂದ ಅದೇ ಆಗ ನೆಲಕ್ಕೆ ಬಿದ್ದು ಉರುಳಾಡ ಹತ್ತಿದ್ದನು. ಇನ್ನೊಬ್ಬ ಕಾವಲುಗಾರನು ಏನು ಮಾಡ ಬೇಕೆಂಬ ವಿಚಾರದಲ್ಲಿದ್ದನು. ಅಷ್ಟರಲ್ಲಿ ಕಮಾಲನು ಬಂದದ್ದನ್ನು ನೋಡಿ ಅವನಿಗೆ ಸಮಾಧಾನನಾಯಿತು ಕಮಾಲನು ತನ್ನ ಕಾರ್ಯ ಸಾಧನೆಗಾಗಿ ಬಂದದ್ದರಿಂದ ಎಚ್ಚರಿದ್ದ ಕಾವಲುಗಾರನನ್ನು ಉಪಾಯ ದಿಂದ ಸ್ಥಳ ಬಿಡಿಸುವದು ಅವಶ್ಯವೆಂದು ಭಾವಿಸಿ ಒಮ್ಮೆಲೇ ಒಂದು ಹಂಚಿಕೆಯನ್ನು ಕಂಡನು. ಆಗ ಅವನು ತಾನು ಹೊಟ್ಟೆ ನೋವಿನ

ಔಷಧವನ್ನು ಬಿಟ್ಟು ಬಂದಿರುವೆನೆಂತಲೂ ಅದನ್ನು ಔಷಧದ ಅಂಗಡಿಯಿಂದ ಬೇಗ ತರಬೇಕೆಂತಲೂ ಒಂದು ಚೀಟಿಯಲ್ಲಿ ಏನೋ ಔಷಧದ ಹೆಸರನ್ನು ಬರೆದಂತೆ ನಟಿಸಿ ಎಚ್ಚರಿದ್ದ ಕಾವಲುಗಾರನ ಕೈಯ್ಯಲ್ಲಿ ಕೊಟ್ಟನು. ಆ ಔಷಧದ ಅಂಗಡಿಯು ಅಲ್ಲಿಂದ ಒಂದೂವರೆ ಮೈಲಿನ ದೂರದಲ್ಲಿತ್ತು. ಕಾವಲುಗಾರನು ಔಷಧ ತರುವ ಅವಸರದ ನಿಮಿತ್ಯದಲ್ಲಿ ತನ್ನ ಕಾವಲಿನ ಕರ್ತವ್ಯವನ್ನೇ ಮರೆತು ಹೊರಟನು.

ಕಾವಲುಗಾರನು ಹೊರಟು ಹೋದ ನಾಲ್ಕಾರು ನಿಮಿಷಗಳಲ್ಲಿ ದುರಂಧರನ ಮೋಟರುಗಳು ಅಲ್ಲಿಗೆ ಬಂದ ಸಪ್ಪಳವು ಕೇಳಿಸಿತು. ಆಗ ಕಮಾಲನು ಸೀಟಿಯನ್ನು ಬಾರಿಸಿದನು. ಹೊಟ್ಟೆ ನೋವಿನಿಂದ ಬಳಲುತ್ತಿದ್ದ ಕಾವಲುಗಾರನು ಸ್ಮೃತಿಯಿಲ್ಲದಂತೆ ಮಲಗಿದ್ದನು. ಸೀಟಿಯ ಧ್ವನಿ ಕೇಳಿದೊಡನೆ ದುರಂಧರನು ವಾಘ, ಉಸ್ತಾದರೊಡನೆ ಮಂದಿರದೊಳಗೆ ಧುಮುಕಿದರು. ಆಗ ವಿಠ್ಠಲದಾಸನು ಮನೆಯಲ್ಲಿರುವ ವೇಳೆಯಾಗಿರಲಿಲ್ಲ. ಅವನು ತನ್ನ ವ್ಯಾಪಾರದ ಅಂಗಡಿಯಲ್ಲಿ ರಾತ್ರಿ ೧೦ ಘಂಟೆಯ ವರೆಗೆ ಟಪಾಲುಗಳಿಗೆ ಉತ್ತರ ಬರೆಯಿಸುತ್ತ ಕುಳಿತು ನಂತರ ಮನೆಗೆ ಬರುತ್ತಿದ್ದನು. ಸೀಟಿಯ ಧ್ವನಿಯನ್ನು ಮತ್ತು ನಾಲ್ಕು ಜನರು ಧಡ್ ಧಡ್ ಎಂದು ಸಪ್ಪಳ ಮಾಡುತ್ತ ಬಂದದ್ದನ್ನು ಕೇಳಿ ಮಾಧುರಿಯೂ ಅವಳ ದಾಸಿಯರೂ ಬಾಗಿಲ ಹತ್ತರ ಬಂದರು. ಆಗ ದುರಂಧರ ಕಮಾಲ, ವಾಘ, ಉಸ್ತಾದರು ಕಿರುಗತ್ತಿ, ಪಿಸ್ತೂಲಗಳನ್ನು ಮುಂಡೆ ಚಾಚಿ ಮಾಧುರಿಗೆ ತಮ್ಮ ಸಂಗಡ ಬರಬೇಕು ಇಲ್ಲವಾದರೆ ಗುಂಡು ಹಾಕುತ್ತೇವೆಂದು ಬೆದರಿಸಿದರು. ಆಗ ಮಾರುತಿಯೆಂಬ ಬಲವಾದ ಮೈಕಟ್ಟಿನ ಆಳು ಪಕ್ಕಕ್ಕೆ ನಿಂತಿದ್ದ ವಾಘನನ್ನು ಕೈಯಿಂದ ದೂಡಿದನು. ಆಗ ಉಸ್ತಾದನು ಆಳಿಗೆ ಪಿಸ್ತೂಲಿನಿಂದ ಗುಂಡಿಕ್ಕಿ ನೆಲಕ್ಕೆ ಕೆಡವಿದನು. ಅಷ್ಟರಲ್ಲಿ ಒಳಗಿದ್ದ ವಿಠ್ಠಲದಾಸನ ಮತ್ತೀರ್ವರದಗಡು, ಸಾವಂತರೆಂಬ ಆಳುಗಳು ಗುಂಡಿನ ಸಪ್ಪಳ ಕೇಳಿ ಓಡಿ ಬಂದರು. ಆಗ ದುರಂಧರ ಕಮಾಲರು ಅವರನ್ನು ಕಿರುಗತ್ತಿಗಳಿಂದ ತಿವಿದರು. ಅದರ ನೋವನ್ನು ತಾಳಲಾರದೆ ಅವರು ನೆಲಕ್ಕೆ ಕುಸಿದು ಬಿದ್ದರು. ಆ ವೇಳೆ ತಡೆಗಟ್ಟಲು ಯಾರೂ ಬರಲಿಲ್ಲ. ಆ ಸಮಯಲ್ಲಿ ಒಂದು ಮೂಲೆ

ಯಲ್ಲಿ ಅವಿತುಕೊಂಡು ನಿಂತಿದ್ದ ಮಾಧುರಿಯ ಕಡೆಗೆ ಕಮಾಲನು ಪಿಸ್ತೂಲನ್ನು ತೋರಿಸಿ ತನ್ನ ಸಂಗಡ ಬರದಿದ್ದರೆ ಜೀವ ಹಾರಿಸುವೆನೆಂದು ಹೇಳಿದನು. ಮಾಧುರಿಯು ಜೀವಕ್ಕೆ ಅಂಜಿ ಕಮಾಲನನ್ನು ಹಿಂಬಾಲಿಸಿದಳು. ಕಮಾಲನು ಅವಳನ್ನು ಹೊರಗೆನಿಂತ ಮೋಟಾರಿನಲ್ಲಿ ಕುಳಿತಿದ್ದ ದುರಂಧರನ ದಾಸಿಯ ಬಳಿಯಲ್ಲಿ ಕೂಡ್ರಿಸಿದನು. ಆದರಲ್ಲಿಯೇ ಕಮಾಲನು ಕುಳಿತುಕೊಂಡನು. ಮತ್ತೊಂದು ಮೋಟರಿನಲ್ಲಿ ದುರಂಧರ, ವಾಘ, ಉಸ್ತಾದರು ಕುಳಿತರು. ಕಮಾಲನು ಕೂಡಲೇ ಸೀಟಿಯನ್ನು ಬಾರಿಸಲು ವಾಹಕರು ಮೋಟರುಗಳನ್ನು ಹೊರಡಿಸಿದರು.

ವಾಹಕರಿಗೆ ಮೊದಲು ಸೂಚನೆಯಿದ್ದ ಮೂಲಕ ಅವರು ಮಿಂಚಿನ ವೇಗದಿಂದ ಮೋಟರಬಂಡಿಗಳನ್ನು ಓಡಿಸಿದರು. ಈ ಅನಾಹುತವು ಸಂಭವಿಸಿದ ಕೆಲವು ನಿಮಿಷಗಳಲ್ಲಿ ವಿಠ್ಠಲದಾಸನ ಮುತಾಲಿಕನು ಮನೆಗೆ ಬರಲಾಗಿ ಗಾಯಹೊಂದಿದ ಆಳುಗಳು ನರಳುತ್ತ ಘಟಿಸಿದ ಸಂಗತಿಯನ್ನು ಮುತಾಲಿಕನಿಗೆ ತಿಳಿಸಿದರು. ಮುತಾಲಿಕನು ಟೆಲಿಫೋನ ಮೂಲಕ ವಿಠ್ಠಲದಾಸನ ವ್ಯಾಪಾರಕಚೇರಿಗೆ ಈ ವರ್ತಮಾನವನ್ನು ತಿಳಿಸಿದನು. ಇದನ್ನು ಕೇಳಿದೊಡನೆ ವಿಠ್ಠಲದಾಸನು ಗಾಬರಿಯಾಗಿ ಒಂದೆರಡು ನಿಮಿಷ ವಿಚಾರಶೂನ್ಯನಾದನು. ಆ ಮೇಲೆ ಅವನ ತಲೆಯಲ್ಲಿ ಥಟ್ಟನೆ ಒಂದು ವಿಚಾರವು ಹೊಳೆಯಿತು. ಮಗಳನ್ನು ಅಪಹರಿಸಿದವರು ಮೋಟರಿನಲ್ಲಿ ಹೋದರೆಂದು ಕೇಳಿದ್ದರಿಂದ ಅವರು ಆ ಪಟ್ಟಣದಲ್ಲಿ ಉಳಿಯದೆ ಬೇರೆ ದೂರದ ಗ್ರಾಮಕ್ಕೆ ಹೋಗತಕ್ಕವರಾದುದರಿಂದ ಮತ್ತು ಅವರನ್ನು ಹಿಂಬಾಲಿಸಿ ಶೋಧಿಸುವದು ಕೂಡಲೇ ಸಾಧ್ಯವಾಗದಿರುವದರಿಂದ ಈ ಸುದ್ದಿಯನ್ನು ಮೊದಲು ಪೋಲೀಸ ಠಾಣೆಗಳಿಗೆ ತಿಳಿಸಬೇಕೆಂಬ ವಿಚಾರವು ಹೊಳೆಯಿತು. ಆಗಲೇ ಅವನು ಪುಣೆಯ ಕೇಂದ್ರ ಪೋಲೀಸ ಕಚೇರಿಗೆ ಟೆಲಿಫೋನಿನಿಂದ ತಿಳಿಸಿದನು. ಕೇಂದ್ರಕಚೇರಿಯು ಎಲ್ಲ ಉಪಕಚೇರಿಗಳಿಗೆ ಆರೋಪಿಗಳನ್ನು ತಡೆಗಟ್ಟಲು ಸೂಚನೆಕಳಿಸಿತು. ಆದರೆ ಎಲ್ಲ ಪೋಲೀಸಕಚೇರಿಗಳಿಗೆ ವಾರ್ತೆ ಮುಟ್ಟುವದರೊಳಗಾಗಿ ದುರಂಧರನ ಮೋಟರುಗಳು ಪುಣೆಯನ್ನು ದಾಟಿ ಪತ್ತೆಯಿಲ್ಲದಂತೆ ಸಾಗಿದ್ದವು.

ಇಷ್ಟು ಕೆಲಸಮಾಡಿ ವಿಠ್ಠಲದಾಸನು ನಿಲ್ಲದೆ ಮೋಟರಿನಲ್ಲಿ ಮನೆಗೆ ಬಂದನು. ಒಳಬಾಗಿಲಿನಲ್ಲಿ ಕಾಲಿಡುತ್ತಲೇ ವಿದ್ಯುತ್ತಿನ ಬಿಳಿಯ ಬೆಳಕಿನಲ್ಲಿ ಕೆಂಡದಂಥ ಕೆಂಪುಬಣ್ಣದ ರಕ್ತದ ಹಾಸಿಗೆಯನ್ನು ಕಂಡನು. ಮುಂದೆಬಂದು ನೋಡುತ್ತಾನೆ, ತನ್ನ ಆಳುಮಗನಾದ ಮಾರುತಿಯು ಉಸುರಾಡದೆ ಮಲಗಿದ್ದಾನೆ. ಪ್ರಾಣವಾಯುವು ಅವನನ್ನು ಬಿಟ್ಟು ಹೋಗಿದೆ! ಇದನ್ನು ಕಂಡು ವಿಠ್ಠಲದಾಸನ ಉಸಿರುಕಟ್ಟಿತು, ಕಣ್ಣು ರೆಪ್ಪೆಗಳು ಏನೆಯಿಕ್ಕದಂತೆ ತೆರೆದುನಿಂತವು; ನಾಡಿಗಳು ನಿಂತುಹೋದವು; ಸ್ವರವು ಕುಗ್ಗಿಹೋಯಿತು. ಕೆಲಹೊತ್ತು ಅವನು ಕಲ್ಲಿನ ಪ್ರತಿಮೆಯಂತೆ ಚೇತನವಿಲ್ಲದೆ ನಿಂತುಕೊಂಡನು. ಆ ಮೇಲೆ ಅವನ ಮುತಾಲಿಕನು ಒಡೆಯನ ಭಾವಮುಗ್ಧತೆಯನ್ನು ಕಂಡು ಅವನ ಕೈಹಿಡಿದು ಸಮೀಪದ ಖುರ್ಚಿಯಮೇಲೆ ಕೂಡ್ರಿಸಿದನು. ಎಂಥ ಬುದ್ಧಿವಂತರಾಗಲಿ, ಧೈರ್ಯ ಶಾಲಿಗಳಾಗಲಿ ಒಮ್ಮೆಲೇ ಘಟಿಸಿದ ಆಪತ್ಕಾಲದಲ್ಲಿ ವಿಚಾರಮೂಢರಾಗು ವದು ಸಹಜವಾಗಿದೆ. ಮುತಾಲಿಕನು ವಿಠ್ಠಲದಾಸನನ್ನು ಸಂತೈಸಿ ಸಂಭ ವಿಸಿದ ಸಂಗತಿಗಾಗಿ ವಿಷಾದಪಡುವದರಲ್ಲಿ ಕಾಲಕಳೆಯದೆ ಅನಾಹುತ ಕಾರರ ಶೋಧೆಯ ಉಪಾಯವನ್ನು ತೀವ್ರಮಾಡಬೇಕೆಂದು ಸೂಚಿಸಿದನು. ಆಗ ಮೊದಲು ನೆರವೇರಿಸತಕ್ಕ ಕೆಲಸವೇನೆಂದರೆ ಮಾರುತಿಯಕೊಲೆಯ ಹಾಗು ಮತ್ತಿಬ್ಬರ ಗಾಯಗಳ ವಿಷಯವಾಗಿ ಪೋಲೀಸರಿಗೆ ವರದಿ ಕಳಿಸುವದಾಗಿತ್ತು. ಮುತಾಲಿಕನು ಈ ಸುದ್ದಿಯನ್ನು ಪೌಜದಾರನಿಗೆ ತಿಳಿಸಿದನು. ಫೌಜದಾರನು ತನ್ನ ಪೋಲೀಸ ಸಿಬ್ಬಂದಿಯಿಂದ ಹಾಗು ಕೆಲವುಜನ ಪಂಚರೊಂದಿಗೆ ವಿಠ್ಠಲದಾಸನ ಮನೆಗೆ ಬಂದನು, ಗಾಯ ಹೊಂದಿದ ದಗಡು ಮತ್ತು ಸಾವಂತರಿಂದ ಎಲ್ಲ ಸಂಗತಿಗಳನ್ನು ಕೇಳಿ ಕೊಂಡು ತನ್ನ ಬುಕ್ಕಿನಲ್ಲಿ ಬರೆದುಕೊಂಡನು. ಆ ಮೇಲೆ ಪಂಚರ ಸಮ ಕ್ಷಮ ಮಾರುತಿಗೆ ಗುಂಡಿನಯೇಟು ತಗಲಿ ಮರಣವಾದದ್ದನ್ನು ಮತ್ತು ಉಳಿದ ಇಬ್ಬರಿಗೆ ಗಾಯಗಳಾದ ವಿವರಗಳನ್ನು ಪಂಚನಾಮೆಯಲ್ಲಿ ಬರೆಯಿಸಿದನು. ಆ ಮೇಲೆ ಫೌಜದಾರನು ಮಾರುತಿಯ ದೇಹವನ್ನು ಮತ್ತು ಗಾಯವಾದ ಆಳುಗಳನ್ನು ಅಸ್ಪತ್ರೆಗೆ ರವಾನೆಮಾಡಿದನು.

ಗಾಯಹೊಂದಿದ ಆಳುಗಳಿಂದ ಕೇಳಿದ ವಿವರಗಳಿಂದ ಅನಾಹುತ

ಕಾರರು ದುರಂಧರರನ ದುಷ್ಟ ಮೇಳವೆಂಬದು ವಿಠ್ಠಲದಾಸನಿಗೆ ಪೂರ್ಣ ನಂಬಿಗೆಯಾಯಿತು. ಆದರೆ ಅವರು ಯಾವ ಸ್ಥಳಕ್ಕೆ ಹೋದರೆಂಬುದು ಗೊತ್ತಾಗದ ವಿಷಯ. ಈ ಸಂಘಟನೆಯ ಬಗ್ಗೆ ವಿಸ್ತಾರವಾದ ಪ್ರಕಟನೆ ಮಾಡುವದು ಹೆಚ್ಚು ಉಪಯುಕ್ತವಾಗಿತ್ತು. ಈ ವಿಚಾರದಿಂದ ವಿಠ್ಠಲ ದಾಸನು ಕೂಡಲೇ ಪುಣೆಯಲ್ಲಿಯ ಮತ್ತು ಮುಂಬಯಿಯಲ್ಲಿಯ ಅಸೋಸಿಯೇಟೆಡ್ ಪ್ರೆಸ್, ಸುದ್ದಿ ಪ್ರಕಟನಾ ಕಚೇರಿಗೆ ಟಲಿಫೋನಿನಿಂದ ತಿಳಿಸಿದನು. ಅದರ ಪರಿಣಾಮವಾಗಿ ಮರುದಿನ ಹಿಂದುಸ್ಥಾನದ ಎಲ್ಲ ದೈನಂದಿನ ಇಂಗ್ಲೀಷ್ ಮತ್ತು ವಿವಿಧ ದೇಶ ಭಾಷೆಗಳ ವರ್ತಮಾನ ಪತ್ರಿಕೆಗಳಲ್ಲಿ ಮಾಧುರಿಯ ಅಪಹರಣದ ಸುದ್ದಿಯು ದೊಡ್ಡ ಅಕ್ಷರಗಳಲ್ಲಿ ಮುದ್ರಿಸಲ್ಪಟ್ಟಿತು. ವಿಠ್ಠಲದಾಸನು ಸುದ್ದಿಯನ್ನು ಕೊಟ್ಟ ಮಾತ್ರಕ್ಕೆ ತೃಪ್ತನಾಗಿ ಕುಳಿತುಕೊಳ್ಳಲಿಲ್ಲ. ಅನಾಹುತಕಾರರು ಹಿಂದೂಸ್ಥಾನ ಬಿಟ್ಟು ಪರದೇಶಕ್ಕೆ ಪ್ರಯಾಣ ಬೆಳೆಸಬಹುದೋ ಎಂಬ ಸಂಶಯವು ಅವನಿಗುಂಟಾಯಿತು. ಪರದೇಶ ಪ್ರಯಾಣ ಬೆಳೆಸಲು ಮುಂಬಯಿಯಿಂದಲೇ ಹಡಗದಿಂದಾಗಲಿ ಇಲ್ಲವೆ ವಿಮಾನದಿಂದಾಗಲೀ ಹೋಗುವುದು ಸಾಧ್ಯ. ಏನೇ ಇರಲಿ ತೀವ್ರವಾಗಿ ಮುಂಬಯಿಗೆ ಹೋದರೆ ಒಂದು ವೇಳೆ ಆರೋಪಿಗಳು ಪ್ರಯಾಣ ಹೊರಡುವ ವೇಳೆಯಲ್ಲಾದರೂ ಸಿಗಬಹುದು ಅಥವಾ ಹೊರಟುಹೋಗಿದ್ದರೆ ಅವರು ಯಾವ ಸ್ಥಳಕ್ಕೆ ಹೋದರೆಂಬುದನ್ನು ಗೊತ್ತುಹಚ್ಚಬಹುದು ಎಂಬ ವಿಚಾರವು ವಿಠ್ಠಲದಾಸನಿಗೆ ಹೊಳೆಯಿತು. ಅವನಲ್ಲಿ ಸಹ ಉತ್ತಮವಾದ ಮೋಟರುಗಳಿಗೆ ಕೊರತೆ ಇರಲಿಲ್ಲ. ತನ್ನ ವಾಹಕರಿಂದ ಶೀಘ್ರವಾಗಿ ಎರಡು ಮೋಟರುಗಳನ್ನು ಸಿದ್ಧಗೊಳಿಸಿ ಒಂದರಲ್ಲಿ ತಾನು ಮತ್ತು ಇಬ್ಬರು ದಾಸಿಯರು ಮತ್ತೊಂದರಲ್ಲಿ ತನ್ನ ಸಶಸ್ತ್ರ ಕಾವಲುಗಾರರನ್ನು ಕುಳ್ಳಿರಿಸಿಕೊಂಡು ಮೋಟರುಗಳನ್ನು ಮುಂಬೈ ರಸ್ತೆಯ ಮೂಲಕ ಸಾಗಿಸುವಂತೆ ಆಜ್ಞೆ ಮಾಡಿದನು.

ಇವೆರಡು ಮೋಟರುಗಳು ಭರದಿಂದ ಸಾಗಿದುವು. ಇಷ್ಟರಲ್ಲಿ ಎಲ್ಲ ಪೋಲೀಸ ಚೌಕಿಗಳಲ್ಲಿದ್ದ ಸಿಪಾಯಿಗಳು ಶಸ್ತ್ರ ಧಾರಿಗಳಾಗಿ ಆರೋಪಿಗಳನ್ನು ತಡೆಗಟ್ಟುವದಕ್ಕಾಗಿ ಸಿದ್ಧರಾಗಿ ನಿಂತುಕೊಂಡಿದ್ದರು. ವರದಿಯು

ವರ್ಣನೆಗೆ ಸರಿಯಾಗಿ ಎರಡು ಮೋಟರುಗಳು ಜೊತೆಯಲ್ಲಿ ಒಂದರ ಹಿಂದೊಂದು ಬರುವದನ್ನು ನೋಡಿ ತಡೆಗಟ್ಟಲು ಮೂರು ನಾಲ್ಕು ಚೌಕಿಯ ಸಿಪಾಯಿಗಳು ಪ್ರಯತ್ನಮಾಡಿದರು. ಆದರೆ ವಾಹಕರು ಖಬರು ತಪ್ಪಿ ಮೋಟರನ್ನು ಸಾಗಿಸುವದನ್ನು ಕಂಡು ಸಿಪಾಯಿಗಳು ಮೋಟರುಗಳ ಬಾಯಲ್ಲಿ ಬಿದ್ದು ಸಾಯುವದಕ್ಕೆ ಅಂಜಿ ಹಿಂದೆಸರಿದರು. ಆದರೆ ಅವರು ಉಳಿದ ಚೌಕಿಗಳಿಗೆ ಅವರ ದಾರಿಯಲ್ಲಿ ಹಗ್ಗ ಬಿಗಿದು ತಡೆಗಟ್ಟಬೇಕೆಂದು ಟೆಲಿಫೋನ್ ಮಾಡಿದರು. ಪಟ್ಟಣದ ಕಡೆಯ ಭಾಗದಲ್ಲಿ ಒಂದು ಸುಂಕದ ಕಟ್ಟೆಯ ಬದಿಯಲ್ಲಿ ಒಂದು ಪೋಲೀಸ ಚೌಕಿಯಿತ್ತು. ಅಲ್ಲಿ ಸುಂಕ ವಸೂಲಿಗಾಗಿ ರಸ್ತೆಗೆ ತಡೆಗಟ್ಟುವಂತೆ ಆಗಾಗ್ಗೆ ಒಂದು ಸರಪಳಿಯು ರಸ್ತೆಯ ಎರಡೂ ಪಕ್ಕದ ಗಿಡಗಳಿಗೆ ಬಿಗಿಯಲ್ಪಡುತ್ತಿತ್ತು. ವಿಠ್ಠಲದಾಸನ ಮೋಟರುಗಳು ಎಲ್ಲ ಪೋಲೀಸ ಚೌಕಿಗಳಿಂದ ಪಾರಾಗಿ ಬಂದವು. ಆದರೆ ಕೊನೆಯಲ್ಲಿ ಸುಂಕದ ಕಟ್ಟೆಯ ಬಳಿಯಲ್ಲಿ ಸರಪಳಿ ಪ್ರತಿಬಂಧವಿದ್ದುದರಿಂದ ಅಲ್ಲಿ ನಿಲ್ಲಲೇ ಬೇಕಾಯಿತು.

ಆ ವೇಳೆಗೆ ಚೌಕಿಯ ಮುಂದಿದ್ದ ಪೋಲೀಸನು ತನಗೆ ಬಂದ ಸುದ್ದಿಯ ಮೇರೆಗೆ ಮೋಟರಿನಲ್ಲಿಯ ಹೆಣ್ಣು ಮಕ್ಕಳನ್ನೂ ಮತ್ತೊಂದು ಬಂಡಿಯಲ್ಲಿಯ ಗಂಡಸರನ್ನೂ ನೋಡಿದೊಡನೆ ಅವರೇ ಅಪರಾಧಿಗಳೆಂದು ಭಾವಿಸಿ ಅವರನ್ನು ಆತಂಕಿನಲ್ಲಿಟ್ಟು ಕೇಂದ್ರ ಪೋಲೀಸ ಕಚೇರಿಗೆ ಟೆಲಿಫೋನಿನಿಂದ ತಿಳಿಸಿದನು. ಅದನ್ನು ಕೇಳಿದೊಡನೆ ಫೌಜದಾರನು ಮೋಟರ ಸೈಕಲ್ ಹತ್ತಿಕೊಂಡು ಆ ಸ್ಥಳಕ್ಕೆ ಬಂದನು. ಆಗ ಅವರು ಆರೋಪಿಗಳಲ್ಲದೆ ವಿಠ್ಠಲದಾಸನ ಪರಿವಾರವೆಂದು ತಿಳಿದುಕೊಂಡನು ಅವರು ಮುಂಬಯಿಗೆ ಅಪರಾಧಿಗಳ ಶೋಧೆಗಾಗಿ ಹೋಗುವೆವೆಂದು ಹೇಳಿದ್ದರಿಂದ ಅವರಿಗೆ ಮುಂದೆ ಸಾಗುವಂತೆ ಅವಕಾಶವಿತ್ತನು. ಇಷ್ಟಾಗುವದರಲ್ಲಿ ರಾತ್ರಿ ಹನ್ನೆರಡು ಘಂಟೆ ಬಾರಿಸಿತು. ಮುಂದೆ ಅವರು ಮೋಟರುಗಳನ್ನು ಎಲ್ಲಿಯೂ ನಿಲ್ಲಿಸದಂತೆ ಸಾಗಿದರು. ಧುರಂಧರನ ಮೋಟರುಗಳು ತಡೆಯಿಲ್ಲದೆ ಹೋದುದರಿಂದ ಅವು ಮುಂಬಯಿಗೆ ರಾತ್ರಿ ಒಂದು ಘಂಟೆಗೆ ತಲುಪಿದ್ದವು. ಧುರಂಧರನು ತನ್ನ ಕಾರ್ಯ

ವನ್ನು ಯಶಸ್ವಿಯಾಗಿ ಕೊನೆಗಾಣಿಸಬೇಕಾದರೆ ಯಾವದಾದರೊಂದು ಪರನಾಡಿಗೆ ಹೋಗುವದು ಲೇಸೆಂದು ಬಗೆದನು. ಮುಂಬಯಿಗೆ ಬಂದ ಕೂಡಲೇ ಅವನು ವಿಮಾನ ಕಂಪನಿಯ ವ್ಯವಸ್ಥಾಪಕನಿಗೆ ಭೆಟ್ಟಿಯಾದನು. ತನಗೆ ಕೂಡಲೇ ಒಂದು ವಿಮಾನವು ಬಾಡಿಗೆಯಿಂದ ಬೇಕಾಗಿರುವದೆಂತಲೂ ಅದರ ಬಾಡಿಗೆ ಕೊಡುವದಲ್ಲದೆ ತನ್ನ ಗುಟ್ಟನ್ನು ಕಾಯ್ದುಡುವ ಸಲುವಾಗಿ ವ್ಯವಸ್ಥಾಪಕನಿಗೆ ಒಂದು ಸಾವಿರ ರೂಪಾಯಿ ಲಂಚಕೊಡುವೆನೆಂತಲೂ ಹೇಳಿದನು.

ವ್ಯವಸ್ಥಾಪಕನು ಹಣದ ಆಶೆಯಿಂದ ಆ ಸೂಚನೆಗೆ ಒಪ್ಪಿ ವಿಮಾನವನ್ನು ಸಿದ್ಧಮಾಡಿಕೊಡಲು ಒಪ್ಪಿದನು. ವಿಮಾನದಲ್ಲಿ ಎಲ್ಲ ಸಲಕರಣಗಳನ್ನು ತುಂಬಿ ವೈಮಾನಿಕನಿಗೆ ಅನುಕೂಲ ಮಾಡಿಕೊಡಲು ನಾಲ್ಕೈದು ಘಂಟೆ ಕಾಲವಾದರೂ ಬೇಕಾಗಿತ್ತು. ಯಾಕೆಂದರೆ ದುರಂಧರನು ಸೂಚಿಸಿದ ಉದ್ದೇಶದ ಮೇರೆಗೆ ಪ್ರಯಾಣದ ದಾರಿಯು ದೂರದಲ್ಲಿತ್ತು. ವಿಮಾನವು ಬೆಳಗಿನ ಆರು ಘಂಟೆಗೆ ಸಿದ್ಧವಾಯಿತು. ದುರಂಧರನ ಪರಿವಾರವೆಲ್ಲವು ಅದರಲ್ಲಿ ಕುಳಿತಿತು. ವೈಮಾನಿಕನು ಯಂತ್ರಕ್ಕೆ ಚಲನೆಯನ್ನು ಕೊಟ್ಟನು. ಅದೇ ವೇಳೆಗೆ ವಿಠ್ಠಲದಾಸನ ಮೋಟರುಗಳು ವಿಮಾನ ನಿಲ್ದಾಣದ ಹೆಬ್ಬಾಗಿಲಿನಲ್ಲಿ ಬಂದವು. ಆದರೆ ಏನು ಪ್ರಯೋಜನ! ದುರಂಧರನ ವಿಮಾನವು ಭರ್ ಎಂದು ಆಕಾಶಕ್ಕೆ ಹಾರಿತು. ವಿಠ್ಠಲದಾಸನು ವಿಮಾನ ನಿಲ್ದಾಣಕ್ಕೆ ಬಂದು ಅಲ್ಲಿಯ ವೈಮಾನಿಕರನ್ನು ವಿಚಾರಿಸಲಾಗಿ ಅವರು ಆಗ ಹೊರಟ ವಿಮಾನದಲ್ಲಿಯ ಜನರ ಸಂಖ್ಯೆಯನ್ನೂ ಅವರ ವರ್ಣನೆಯನ್ನೂ ವಿವರಿಸಿದರು. ಅದನ್ನು ಕೇಳಿ ವಿಠ್ಠಲದಾಸನು ಅದು ದುರಂಧರನ ಮೇಳವೆಂದು ನಿಶ್ಚಯವಾಗಿ ತಿಳಿದುಕೊಂಡನು.

ಆಗ ದುರಂಧರನಿಗೆ ವಿಮಾನ ಸಿದ್ಧಮಾಡಿಕೊಟ್ಟ ವ್ಯವಸ್ಥಾಪಕನು ವಿಶ್ರಾಂತಿಗಾಗಿ ಮನೆಗೆ ತೆರಳಿದ್ದನು. ಅವನ ಸ್ಥಳದಲ್ಲಿ ಮತ್ತೊಬ್ಬನು ಹಗಲುವೇಳೆಯ ವ್ಯವಸ್ಥಾಪಕನು ಬಂದಿದ್ದನು. ವಿಠ್ಠಲದಾಸನು ಆ ವ್ಯವಸ್ಥಾಪಕನಿಗೆ ಬೇಡಿದಷ್ಟು ಹಣ ಕೊಡುವೆನೆಂತಲೂ ಒಂದು ವಿಮಾನವನ್ನು ಆಗಿಂದಾಗ ಹೊರಡಿಸಿ ಮೊದಲುಹೊರಟ ವಿಮಾನದಲ್ಲಿಯ

ಅಪರಾಧಿಗಳನ್ನು ತಡೆಗಟ್ಟಬೇಕೆಂತಲೂ ಅದು ಸಾಧ್ಯವಾಗದಿದ್ದರೆ ಅವರು ಹೋಗುವ ಸ್ಥಳಕ್ಕೆ ಬೆನ್ನಟ್ಟಹೋಗಬೇಕೆಂತಲೂ ಹೇಳಿದನು. ವ್ಯವಸ್ಥಾಪಕನು ಹಣದಾಸೆಗೆ ಬಾಯಿಬಿಟ್ಟು ಸಿದ್ಧವಾಗಿದ್ದ ಹೊಸ ವಿಮಾನವೊಂದನ್ನು ಚತುರನಾದ ವೈಮಾನಿಕನಿಂದ ಹೊರಡಿಸಿದನು. ಅದರಲ್ಲಿ ವಿಠ್ಠಲದಾಸನು ತನ್ನ ಪರಿವಾರದವರೊಡನೆ ಕುಳಿತನು. ವಿಮಾನವು ವಿಶಿಷ್ಟ ವೇಗಶಕ್ತಿಯುಳ್ಳದ್ದಾಗಿದ್ದುದರಿಂದ ಕೆಲವು ನಿಮಿಷಗಳಲ್ಲಿಯೇ ದುರಂಧರನ ವಿಮಾನದ ಸಮೀಪಕ್ಕೆ ಬಂದಿತು. ಬೆನ್ನಟ್ಟಬಂದ ವಿಮಾನವನ್ನು ನೋಡಿ ದುರಂಧರನ ಎದೆಯು ಢವ,ಢವ ಎನ್ನಹತ್ತಿತು. ಅಪರಾಧಿಗಳ ಮನಸ್ಸು ಯಾವಾಗಲೂ ಅಂಜಿಕೆಯಲ್ಲಿ ಹಾಗು ಅಶಾಂತತೆಯಲ್ಲಿರುವದು ಸ್ವಾಭಾವಿಕವು. ವೈಮಾನಿಕನಿಗೆ ತ್ವರೆಯಿಂದ ಸಾಗಲು ಅವನು ಒತ್ತಾಯಪಡಿಸಿದನು. ಇಷ್ಟರಲ್ಲಿ ವಿಠ್ಠಲದಾಸನ ವಿಮಾನವು ಧುರಂಧರನ ವಿಮಾನದಮುಂದೆ ಪುಟನೆಗೆದು ತಟಗಟ್ಟುವಂತೆ ಚಲಿಸಹತ್ತಿತು. ವಿಮಾನವನ್ನು ಮುಂದೆ ಸಾಗಿಸಿದಲ್ಲಿ ಅವೆರಡು ಡಿಕ್ಕಿಹೊಡೆದು ಸಮುದ್ರದಲ್ಲಿ ಬೀಳುವಸಂಭವವಿತ್ತು. ಆಗ ಪ್ರಸಂಗಾವಧಾನಿಯಾದ ಕಮಾಲನು ಅಪಾಯವನ್ನು ತಪ್ಪಿಸಲು ತನ್ನಲ್ಲಿಟ್ಟುಕೊಂಡು ಬಂದ ವಿಷವಾಯುವನ್ನು ವಿಠ್ಠಲದಾಸನ ವಿಮಾನದಕಡೆಗೆ ಚಿಮ್ಮಿದನು. ಅದನ್ನು ಸಹಿಸಲಾರದೆ ವೈಮಾನಿಕನು ತನ್ನ ವಿಮಾನವನ್ನು ಕೆಳಗಿಳಿಸಬೇಕಾಯಿತು.

## ಪ್ರಕರಣ ೧೪

# ಅಗಾಧ ಪಲಾಯನ

ವಿಮಾನದ ತಡೆಯು ದೂರಾದಮೇಲೆ ದುರಂಧರನ ವಿಮಾನವು ವಾಯುವೇಗದಿಂದ ಮುಂದೆ ಸಾಗಿತು. ಅದು ಯಾವದಿಕ್ಕಿಗೆ ಹೋಯಿತೆಂಬದು ಅರಿಕೆಯಿಲ್ಲದಾಯಿತು. ವಿಠ್ಠಲದಾಸನ ವಿಮಾನವು ಕೆಳಗಿಳಿಯು

ವಾಗ ಯಂತ್ರವು ವ್ಯತ್ಯಸ್ಥವಾದುದರಿಂದ ವೈಮಾನಿಕನ ಸ್ವಾಧೀನದಲ್ಲಿ ಉಳಿಯದಂತಾಯಿತು. ಅದು ಕೆಳಮುಖವಾಗಿ ಇಳಿಯಹತ್ತಿತು. ಕೆಳಗೆ ನೆಲವಿಲ್ಲ. ಅರಬೀ ಸಮುದ್ರವು ಅಲೆಗಳನ್ನು ಅಪ್ಪಳಿಸುತ್ತ ಭೋರ್ಗರೆಯುತ್ತಿದೆ. ಕೆಲವು ನಿಮಿಷಗಳಲ್ಲಿ ಸಮುದ್ರದ ದವಡೆಯಲ್ಲಿ ಆಹುತಿಯಾಗುವೆವೆಂದು ವಿಠ್ಠಲದಾಸನ ಪರಿವಾರದವರಿಗೆ ಅಂಜಿಕೆಯೆನಿಸಿತು. ವಿಮಾನವು ಇಳಿಯುತ್ತ ಬಂದು ಒಂದು ಸಣ್ಣ ನಡುಗಡ್ಡೆಯ ಉಸುಕಿನ ಮೈದಾನದಲ್ಲಿ ಅಪ್ಪಳಿಸಿಬಿದ್ದಿತು. ವಿಮಾನಕ್ಕೆ ಧಕ್ಕೆಯಾಯಿತು. ಒಳಗೆ ಕುಳಿತವರಿಗೆ ಗಾಯಗಳುಂಟಾದವು. ಕೆಲವು ನಿಮಿಷಗಳವರೆಗೆ ಅವರು ಮೂರ್ಛೆಹೊಂದಿದರು. ವೈಮಾನಿಕನಿಗೆ ಪ್ರಾಣಾಂತ ಅಪಾಯವುಂಟಾಯಿತು. ವಿಠ್ಠಲದಾಸನ ಪರಿವಾರವು ಮೂರ್ಛೆಯಿಂದೆದ್ದ ಮೇಲೆ ಮುರಿದ ವಿಮಾನದಿಂದಿಳಿದರು.

ವಿಮಾನವು ಬಿದ್ದ ಸ್ಥಳವು ಒಂದು ಮೀನು ಬಲೆಗಾರರ ಸಣ್ಣ ನಡುಗಡ್ಡೆಯು. ಅಲ್ಲಿ ಮೀನುಗಾರರ ಹುಲ್ಲಿನ ಗುಡಿಸಲುಗಳಿದ್ದವು. ಮೀನು ಹಿಡಿಯುವದಕ್ಕಾಗಿ ಅವರು ನಾಲ್ಕಾರು ದೋಣಿಗಳನ್ನು ಮಾತ್ರ ಇಟ್ಟುಕೊಂಡಿದ್ದರು. ವಿಠ್ಠಲದಾಸನು ಮುಂಬೈಗೆ ತಿರುಗದ ಹೊರತು ಗತ್ಯಂತರವಿರಲಿಲ್ಲ. ಆದರೆ ಅಲ್ಲೋಲ ಕಲ್ಲೋಲವಾದ ಸಮುದ್ರದಲ್ಲಿ ದೋಣಿಯಿಂದ ಪ್ರಯಾಣ ಮಾಡುವದು ಹೇಗೆ ಸಾಧ್ಯ? ತೀವ್ರ ಹೋಗದಿದ್ದರೆ ಬಲವಾಗಿ ಗಾಯ ಹೊಂದಿದ ವೈಮಾನಿಕನು ಚಿಕಿತ್ಸೆಯಿಲ್ಲದೆ ಸತ್ತು ಹೋಗುವನು. ಹೀಗೆಂದು ವಿಚಾರದಲ್ಲಿರುವಾಗ ಒಬ್ಬ ಮೀನುಗಾರನು ವಿಠ್ಠಲದಾಸನ ಹತ್ತರ ಬಂದು ಅವರ ವಿಪತ್ತನ್ನು ಕಂಡು ಮರುಗಿದನು. ಮೀನುಗಾರನು ಬಹು ಎದೆಗಾರನಾಗಿದ್ದನು. ಎಂಥ ಭಯಂಕರವಾದ ಮಳೆಗಾಳಿಗಳಲ್ಲಿಯೂ, ಬಿರುಸಾಗಿ ಉಕ್ಕೇರುವ ಸಾಗರದಲ್ಲಿಯೂ ದೋಣಿಯನ್ನು ಸಾಗಿಸಲು ಹಿಂಜರಿಯುತ್ತಿರಲಿಲ್ಲ. ಅವನು ವಿಠ್ಠಲದಾಸನ ಪರಿವಾರವನ್ನು ಸಮೀಪದ ಅರಬೀ ದೇಶದ ಬಂದರಕ್ಕೆ ಮುಟ್ಟಿಸುವೆನೆಂದು ಹೇಳಿದನು. ವಿಠ್ಠಲದಾಸನಿಗೆ ಧೈರ್ಯ ಸಾಲಲಿಲ್ಲ ಆದರೆ ಕಾಡುಜನರ ನಡುಗಡ್ಡೆಯಲ್ಲಿ ಊಟ ವಸತಿಗಳಿಲ್ಲದೆ ಇರುವದ

ಕ್ಕಿಂತ ಸುದೈವವಿದ್ದಲ್ಲಿ ಜನವಸತಿಯು ಹಾಗು ಹಡಗು ನಿಲ್ಲುವ ಬಂದರಕ್ಕೆ ಹೋಗುವದು ಉತ್ತಮವೆಂದು ಭಾವಿಸಿದನು.

ವಿಠ್ಠಲದಾಸನು ಮೀನುಗಾರನ ಸೂಚನೆಗೆ ಒಪ್ಪಿಗೆಕೊಟ್ಟನು. ಆಗ ಮೀನುಗಾರನು ತನ್ನ ನಾವನ್ನು ಸಿದ್ಧಪಡಿಸಿ ಗಾಯ ಹೊಂದಿದ ವೈಮಾನಿಕನನ್ನು ನಾವಿನಲ್ಲಿ ಎತ್ತಿ ಕೂಡ್ರಿಸಿದನು. ಉಳಿದವರು ಸಹ ಅದರಲ್ಲಿ ಕುಳಿತರು. ಮೀನುಗಾರನು ನಾವನ್ನು ಸಾಗಿಸುತ್ತ ಮೂವತ್ತು ಮೈಲುಗಳ ವರೆಗೆ ಸುರಕ್ಷಿತವಾಗಿ ಪ್ರಯಾಣ ಮಾಡಿದನು. ಆ ವೇಳೆಗೆ ಒಂದು ಭಯಂಕರವಾದ ಬಿರುಗಾಳಿಯೆದ್ದಿತು. ಸಮುದ್ರದ ಅಲೆಗಳು ಆಗಾಗ್ಗೆ ದೋಣಿಯಲ್ಲಿ ನೀರನ್ನು ಚಿಮ್ಮುವದಕ್ಕೆ ಪ್ರಾರಂಭಿಸಿದವು. ದೋಣಿಯು ಹೊಯ್ದಾಡುತ್ತ ತಲೆಕೆಳಗಾಗುವಂತೆ ತೋರ ಹತ್ತಿತು. ಅದರಲ್ಲಿ ಕುಳಿತವರು ಜೀವದಾಸೆ ತೊರೆದು ತಮ್ಮ ಸಾವು ನಿಶ್ಚಯವೆಂದು ಬಗೆದರು. ಮೀನುಗಾರನು ನಾಲ್ಕು ಆಳಿನ ಶಕ್ತಿಯುಳ್ಳವನಾದುದರಿಂದ ದೋಣಿಯು ತಲೆಕೆಳಗಾಗದಂತೆ ಎರಡೂ ಕೈಗಳಿಂದ ಹುಟ್ಟುಗಳನ್ನು ಮೀಟಿ ದೋಣಿಯ ಸಮತೆಯನ್ನು ಕಾಯ್ದಿಟ್ಟು ಕೊಂಡಿದ್ದನು. ಆದರೆ ಶ್ರಮಸಹಿಸುವದು ಎಷ್ಟುಕಾಲ ಸಾಧ್ಯ! ಅವನಿಗೂ ಆಟೋಪ ಮೀರಿತು. ಮುಖದಲ್ಲಿ ನಿರಾಶೆಯ ಲಕ್ಷಣವು ತೋರಹತ್ತಿತು. ಅಷ್ಟರಲ್ಲಿ ಒಂದು ಪ್ರಯಾಣಿಕರ ಹಡಗವು ಹೋಗುತ್ತಿರುವದು ಕಂಡಿತು. ಮೀನುಗಾರನು ಒಮ್ಮೆಲೆ ತನ್ನ ದೋಣಿಯ ಮಧ್ಯದಲ್ಲಿದ್ದ ಗಾಳೀಪಟದ ಕೋಲಿನ ತುದಿಗೆ ಕೆಂಪು ನಿಶಾನೆಯನ್ನೇರಿಸಿದನು. ಆಗ ಬಿರುಸಾದ ಸುಂಟರ ಗಾಳಿಯಿದ್ದುದರಿಂದ ಪ್ರಯಾಣಿಕರ ಹಡಗದ ನಾವಿಕನು ಸುತ್ತಲೂ ದುರ್ಬೀನು ಮುಖಾಂತರ ನೋಡುತ್ತಿರಲು ಒಂದು ದೋಣಿಯಲ್ಲಿಯ ಜನರು ಭಯದಿಂದ ಕೈಯೆತ್ತಿಕೊಂಡು ನಿಂತಿರುವದು ಕಾಣಿಸಿತು. ಕೂಡಲೇ ನಾವಿಕನು ಹಡಗವನ್ನು ದೋಣಿಯ ಕಡೆಗೆ ತಿರುಗಿಸಿದನು.

ದೋಣಿಯ ಹತ್ತರ ಹಡಗವು ಬರುವದರೊಳಗಾಗಿ ಸಮುದ್ರದ ನೀರು ಒಳ ಭಾಗದಲ್ಲಿ ಪ್ರವೇಶಿಸಿ ದೋಣಿಯನ್ನು ತಳಕ್ಕೆ ಎಳೆಯುವ ಪ್ರಮಾಣದಲ್ಲಿತ್ತು. ಹಡಗವು ಸಮೀಪಕ್ಕೆ ಬಂದೊಡನೆ ನಾವಿಕನು

ದೋಣಿಯು ಮುಳುಗದಂತೆ ಹಡಗದ ಸರಪಳಿಯ ಕೊಂಡಿಗಳಿಗೆ ದೋಣಿಯನ್ನು ಬಿಗಿದನು. ಆ ಮೇಲೆ ಅದರೊಳಗಿನ ಜನರನ್ನು ಹಡಗದೊಳಗೆ ಎತ್ತಿಕೊಂಡನು. ದೋಣಿಯೊಳಗಿನ ನೀರನ್ನು ಹೊರಚೆಲ್ಲಿ ಮೀನುಗಾರನ ತೊಡಕನ್ನು ಬಿಡಿಸಿದನು. ಈಗ ವಿಠ್ಠಲದಾಸನು ಮೀನುಗಾರನಿಗೆ ಸಾಕಷ್ಟು ಹಣಕೊಟ್ಟು ಸಂತೋಷಗೊಳಿಸಿದನು. ಹಡಗವು ಮುಂಬೈಗೆ ಹೋಗುವದಾದುದರಿಂದ ವಿಠ್ಠಲದಾಸನ ಪರಿವಾರವು ಅದರಲ್ಲಿ ಪ್ರಯಾಣ ಮಾಡಿತು. ಹಡಗದಲ್ಲಿ ಗಾಯ ಹೊಂದಿದ ವೈಮಾನಿಕನಿಗೆ ಔಷದೋಪಚಾರ ದೊರೆತದ್ದರಿಂದ ಅವನು ಸಾವಿನ ದವಡೆಯಿಂದ ಪಾರಾದನು ವಿಠ್ಠಲದಾಸನ ಪರಿವಾರವು ಮುಂಬಯಿಗೆ ಸುರಕ್ಷಿತವಾಗಿ ತಲುಪಿತು. ಆದರೆ ಅವನು ಅಪರಾಧಿಗಳ ಶೋಧೆಗೆ ಹೊರಟ ಪ್ರಯತ್ನವು ವಿಫಲವಾದುದರಿಂದ ಅವನ ಕಳವಳವು ಹೆಚ್ಚಾಯಿತು.

ಅಪರಾಧಿಗಳ ವಿಮಾನವು ಪಾರಾಗಿ ಹೋದಮೇಲೆ ಅದು ದಕ್ಷಿಣ ಆಫ್ರಿಕೆಯ ದರ್ಬಾನ ಪಟ್ಟಣದಲ್ಲಿ ಇಳಿಯಿತು. ದುರಂಧರನ ಪರಿವಾರವು ಒಂದು ವಸತಿಗ್ರಹದಲ್ಲಿ ಠಾಣೆಯನ್ನು ಹಾಕಿತು. ಅಲ್ಲಿ ಹಿಂದುಸ್ಥಾನದ ಅನೇಕ ಜನರು ವ್ಯಾಪಾರಕ್ಕಾಗಿ, ನೌಕರಿಗಾಗಿ ಬಂದವರಿದ್ದರು. ಆದರೆ ಅಲ್ಲಿಯ ನಿವಾಸಿಗಳಾದ ಬಿಳಿಯ ಜನರು ಹಿಂದೀಯರನ್ನು ವರ್ಣಭೇದದ ಮೂಲಕ ಅನಾದರದಿಂದ ಕಾಣುತ್ತಿದ್ದರು. ಹಿಂದೀಯರಿಗೆ ಪಟ್ಟಣಿಗರ ಹಕ್ಕುಗಳ ನಿರ್ಬಂಧವಿತ್ತು. ಚುನಾವಣೆಗಳಲ್ಲಿ ಮತಕೊಡುವ ಹಾಗು ಚುನಾವಣೆಯಲ್ಲಿ ಉಮೇದ್ವಾರರಾಗಿ ನಿಲ್ಲುವ ಹಕ್ಕುಗಳಿರಲಿಲ್ಲ, ಉಗಿ ಬಂಡಿಗಳಲ್ಲಿ ೧ನೆಯ ಅಥವಾ ೨ನೆಯ ವರ್ಗದ ಡಬ್ಬಿಗಳಲ್ಲಿ ಪ್ರಯಾಣ ಮಾಡಲು ಅವರಿಗೆ ಸೌಲಭ್ಯ ಇರಲಿಲ್ಲ. ಬಿಳಿಜನರ ವಾಸಸ್ಥಳದ ಓಣಿಗಳಲ್ಲಿ ಅಲೆದಾಡಲು ಸಹ ಅವರಿಗೆ ಪ್ರತಿಬಂಧವಿತ್ತು. ಈ ಹಕ್ಕು ದೊರಕಿಸುವ ಸಲುವಾಗಿ ಅಲ್ಲಿ ಒಂದು ಅವಿಶ್ರಾಂತ ಚಳಿವಳಿಯೇ ನಡೆದಿತ್ತು. ಮಹಾತ್ಮಾಗಾಂಧಿಯವರು ಅಲ್ಲಿಯ ಕಾಯ್ದೆ ಭಂಗಮಾಡಿ ಕೆಲವು ಸಾರಿ ಶಿಕ್ಷೆಗೆ ಗುರಿಯಾಗಿದ್ದರು. ಇಂಥ ಗಂಭೀರವಾದ ಪರಿಸ್ಥಿತಿಯಲ್ಲಿ ಅಲ್ಲಿ ಪರಕೀಯರು ಏನಾದರೊಂದು ಕಾರ್ಯವನ್ನು ಸುರಕ್ಷಿತವಾಗಿ ಸಾಗಿಸುವದು ಸುಲಭವಾಗಿರಲಿಲ್ಲ.

ದುರಂಧರನು ದುಡ್ಡಿನ ಬಲದಿಂದ ವಸತಿ ಸ್ಥಾನವನ್ನು ದೊರಕಿಸಿದನು. ಮುಂದೆ ಸಾಧಿಸಬೇಕಾದ ಅವನ ಕಾರ್ಯವು ಮಹತ್ವದ್ದಿತ್ತು. ಅವನು ಅಲ್ಲಿ ಬಹುಕಾಲ ವಾಸವಾಗಿರುವದು ಸಾಧ್ಯವಿಲ್ಲದಿದ್ದರೂ ತನ್ನ ಉದ್ದೇಶವನ್ನು ಕೊನೆಗಾಣಿಸಿಕೊಂಡು ಹೋಗುವದು ಅವನಿಗೆ ಬೇಕಾಗಿತ್ತು. ಮಾಧುರಿಯನ್ನು ತನ್ನ ಪ್ರಿಯಳನ್ನಾಗಿ ಮಾಡಿಕೊಳ್ಳಲು ಕಾಯಿದೆಯಿಂದ ಮುದ್ರೆ ದೊರೆತರೆ ತನಗೆ ಮುಂದಿನ ತೊಂದರೆ ತಪ್ಪುವದೆಂದು ಅವನ ಭಾವನೆ. ದರ್ಬಾನ ಪಟ್ಟಣಕ್ಕೆ ಬಂದ ಮೇಲೆ ಅವನು ತುರ್ಕೀ ಮಾದರಿಯ ಪೋಷಾಕು ಹಾಕಿಕೊಂಡನು. ಮಾಧುರಿಯ ಹೆಸರನ್ನು ಬದುಲುಮಾಡಿ ಅಯೇಷಾ ಎಂಬ ಹೆಸರಿನಿಂದ ಕರೆಯಲು ನಿಶ್ಚಯಿಸಿದನು. ಕಮಾಲನು ಸಹ ಒಂದು ಕಪ್ಪು ಕೋಟು, ಚಣ್ಣ ಮತ್ತು ಎತ್ತರವಾದ ಕರಿಯ ಟೊಪ್ಪಿಗೆಯನ್ನು ಧರಿಸಿಕೊಂಡನು. ಉಡುಪನ್ನು ಸ್ವಚ್ಛವಾಗಿಟ್ಟುಕೊಳ್ಳುವ ರೂಢಿಯು ಅವನಲ್ಲಿರಲಿಲ್ಲ. ರಾತ್ರಿಯಲ್ಲಿ ಮಲಗುವಾಗಲೂ ಸಹ ಕೋಟು ಟೊಪ್ಪಿಗೆಗಳನ್ನು ಹಾಕಿಕೊಂಡೇ ಮಲಗುತ್ತಿದ್ದನು. ಆದುದರಿಂದ ಅವನ ಟೊಪ್ಪಿಗೆಯು ಮುದುಡಿ ಮುರಿದ ಬುಟ್ಟಿಯಂತೆ ಕಾಣುತ್ತಿತ್ತು. ಅವನ ಆಕಾರ ಮೊದಲೇ ಅಸಡ್ಡಾಳ! ಸಂಪೂರ್ಣವಾಗಿ ಕಪ್ಪು ಉಡಿಗೆ ಧರಿಸಿದ್ದರಿಂದ ಅವನು ಸೌತೆ ಹೊಲದೊಳಗಿನ ಬೆದರಿನ ಪ್ರತಿಮೆಯಂತೆ ಕಾಣುತ್ತಿದ್ದನು.

ಕಮಾಲನು ಬೀದಿಗಳಲ್ಲಿ ಹೊರಟಾಗ ಸಣ್ಣ ಬಾಲಕರು ಬೆದರಿ ಮನೆಯೊಳಕ್ಕೆ ಓಡಿಹೋಗುತ್ತಿದ್ದರು ಮಬ್ಬುಗತ್ತಲಲ್ಲಿ ಜನರು ಅವನನ್ನು ಕರಡಿಯೆಂದು ಭಾವಿಸಿ ದೂರ ಸರಿಯುತ್ತಿದ್ದರು. ಆದರೆ ಜನರಿಗೆ ಅವನ ದುರ್ಬುದ್ಧಿ, ದುರಾಚಾರಗಳು ಮಾತ್ರ ಗೊತ್ತಿರಲಿಲ್ಲ. ಹಾಗೆ ಗೊತ್ತಿದ್ದರೆ ಅವನನ್ನು ಪಟ್ಟಣದಿಂದ ದೂರ ತಳ್ಳುತಿದ್ದರು. ದುರಂಧರನ ಸೂಚನೆಯ ಮೇರೆಗೆ ಕಮಾಲನು ಮದುವೆಗೆ ಮುದ್ರೆ ಹಾಕುವ ರಿಜಿಸ್ಟ್ರಾರರ ಕಚೇರಿಯನ್ನು ಗೊತ್ತುಹಚ್ಚಿದನು. ತನ್ನ ಸ್ವಭಾವಿಕವಾದ ಕುತಂತ್ರಗಳಿಂದ ರಿಜಿಸ್ಟ್ರಾರನನ್ನು ಪರಿಚಯಮಾಡಿಕೊಂಡನು. ಹಿಂದುಸ್ಥಾನದಿಂದ ತಂದ ಕೆಲವು ಬೆಳ್ಳಿಯ ಪಾತ್ರೆಗಳನ್ನು ಅವನಿಗೆ ಕಾಣಿಕೆಯಾಗಿ ಕೊಟ್ಟನು. ಸುಂದರವಾದ ನಕ್ಷೆಗಳುಳ್ಳ ಪಾತ್ರೆಗಳನ್ನು

ಸ್ವೀಕರಿಸಿದ ಅಧಿಕಾರಿಯು ಕಮಾಲನ ಉಪಕಾರವನ್ನು ಮನ್ನಿಸಿ ಅವನ ಕೆಲಸವೇನಾದರೂ ಇದ್ದರೆ ಮಾಡುವದಾಗಿ ವಚನಕೊಟ್ಟನು. ದುರಂಧರನು ತನ್ನ ತುರ್ಕಿ ಪೋಷಾಕಿಗೆ ಒಪ್ಪುವಂತೆ ಮುಹಮ್ಮದ ಯುಸುಫ ಎಂದು ಹೆಸರಿಟ್ಟುಕೊಂಡನು. ಮದುವೆಯನ್ನು ನೋಂದ ಮಾಡಿಸಲು ಗುರುತಿನ ಸಾಕ್ಷಿಗಳು ಬೇಕಾಗಿದ್ದವು. ದರ್ಬಾನದಲ್ಲಿ ಕೆಲವು ಮುಸಲ್ಮಾನ ಶ್ರೀಮಂತ ವ್ಯಾಪಾರಿಗಳಿದ್ದರು. ಅವರಲ್ಲಿ ಇಸ್ಮಾಯಿಲ್ ಸೇಟನೆಂಬವನೊಬ್ಬನು

ಇಸ್ಮಾಯಿಲ್ ಸೇಟನು ಪುಣೆಯ ಪಟ್ಟಣದವನು. ದರ್ಬಾನ ಪಟ್ಟಣಕ್ಕೆ ಅವನು ವ್ಯಾಪಾರಕ್ಕೆ ಐದುವರ್ಷದ ಹಿಂದೆ ಹೋಗಿ ಅಲ್ಲಿ ವಾಸಮಾಡಿದವನಾಗಿದ್ದನು. ದುರಂಧರನಿಗೆ ಅವನ ಪರಿಚಯುವಿರಲಿಲ್ಲ— ಆದರೆ ಪುಣೆಯಲ್ಲಿರುವಾಗ ದುರಂಧರನು ಅವನನ್ನು ನೋಡಿದ್ದನು. ಹೀಗಿದ್ದಾಗ ತಾನೂ ಪುಣೆಯ ಪಟ್ಟಣಿಗನೆಂದು ಹೇಳಿದರೆ ಸೇಟನು ಸಂಶಯಪಡಬಹುದೆಂದು ತಿಳಿದು ತಾನು ಕರಾಚಿಯವನೆಂದೂ ದರ್ಬಾನದಲ್ಲಿ ಯಾವದಾದರೊಂದು ಉದ್ದಿಮೆ ಪ್ರಾರಂಭಿಸಲಿಕ್ಕೆ ಬಂದಿರುವೆನೆಂದೂ ಅಲ್ಲಿಯ ಜನರಿಗೆ ಹೇಳಬೇಕೆಂದು ನಿರ್ಧರಿಸಿದನು. ದುರಂಧರನು ಕಮಾಲನೊಡನೆ ಇಸ್ಮಾಯಿಲಸೇಟನಿಗೆ ಭೆಟ್ಟಿಯಾಗಿ ತನ್ನ ಸಮಾಚಾರವನ್ನು ತಿಳಿಸಿದನು. ಸೇಟನು ಶ್ರೀಮಂತನಾದರೂ ನಿಗರ್ವಿ, ದಯಾವಂತ, ಪರೋಪಕಾರಿಯಾಗಿದ್ದನು. ಆದರೆ ಅವನು ಯಾವದೇ ಕೆಲಸ ಮಾಡುವ ಮೊದಲು ಪೂರ್ಣವಿಚಾರಮಾಡದೇ ಮಾಡುತ್ತಿರಲಿಲ್ಲ. ದುರಂಧರನು (ಮುಹಮ್ಮದ ಯುಸುಫ) ಕರಾಚಿಯಿಂದ ಬಂದಿರುವೆನೆಂತಲೂ ಇಲ್ಲಿ ತನ್ನ ಮದುವೆ ನೋಂದಮಾಡಿಸಿಕೊಳ್ಳುವೆನೆಂತಲೂ ಅದಕ್ಕೆ ಸೇಟನ ಸಾಕ್ಷಿ ಬೇಕೆಂತಲೂ ಕೇಳಿದಾಗ ಸೇಟನಿಗೆ ಅದು ವಿಲಕ್ಷಣವಾಗಿ ತೋರಿತು. ದುರಂಧರನ ಉರ್ದು ಭಾಷೆಯು ಮರಾಠಿ ಭಾಷೆಯ ಮಿಶ್ರಣವುಳ್ಳದ್ದಾಗಿ "ಕಶ್ಯಾಲಾ, ಕುಟಲೆ, ಮಿಟಲೆ" ಎಂಬ ಶಬ್ದಗಳು ನಡುನಡುವೆ ಬರುತ್ತಿದ್ದುದರಿಂದ ಸೇಟನ ಕಿವಿಯಲ್ಲಿ ಆ ಶಬ್ದಗಳು ಹಂಚಿನಮೇಲೆ ಅವಲಕ್ಕಿಯನ್ನು ಹುರಿಯುವ ಸಪ್ಪಳದಂತೆ

ಛಟ್ ಪಟ್ ಎಂದಹಾಗಾಯಿತು. ಇದರಿಂದ ಸೇಟನ ಸಂಶಯವು ಬಲವಾಯಿತು.

ದುರಂಧರನು ಮರುದಿನ ಹನ್ನೆರಡು ಘಂಟೆಗೆ ಮದುವೆಯನ್ನು ನೋಂದಮಾಡಲು ನಿರ್ಧರಿಸಿರುವೆನೆಂತಲೂ ಆಗ ಸೇಟರನ್ನು ಕರೆಕಳಿಸುವೆ ನೆಂತಲೂ ಸೇಟರಿಗೆ ಹೇಳಿದನು. ಆದರೆ ಸೇಟನು ಸಂಶಯದಲ್ಲಿ ಬಿದ್ದುದರಿಂದ ಆ ವಿಷಯದಲ್ಲಿ ಚನ್ನಾಗಿ ಶೋಧೆ ಮಾಡಬೇಕೆಂದೆಣಿಸಿ ಅವನು ಹೇಳಿದ್ದೇನೆಂದರೆ, "ಒಳ್ಳೇದು ಈ ದಿನ ರಾತ್ರಿ ಒಂಭತ್ತು ಘಂಟೆಗೆ ನಿಮ್ಮ ವಸತಿಗೆ ಬರುವೆ. ಆಗ ನಿಮಗೆ ಬೇಕಾದ ಸಾಕ್ಷಿಗಳನ್ನು ಕರೆದುಕೊಂಡು ಬಂದು ನಿಮಗೆ ಭೆಟ್ಟಿಮಾಡಿಸುವೆನೆಂದು ಹೇಳಿದನು. ಆಗ ದುರಂಧರ, ಕಮಾಲರು ಸೇಟರನ್ನು ಅಭಿನಂದಿಸಿ ಹೊರಟು ಹೋದರು. ಸೇಟನು ತಾನು ನಿಯಮಿಸಿದ ವೇಳೆಗೆ ತನ್ನ ಇಬ್ಬರು ಗುಮಾಸ್ತರನ್ನು ಕೆರೆದುಕೊಂಡು ದುರಂಧರನ ವಸತಿಗ್ರಹಕ್ಕೆ ಬಂದನು. ಆಗ ದುರಂಧರ ಕಮಾಲರು ಯಥೇಚ್ಛವಾಗಿ ಊಟ ಮಾಡಿ ತೇಗುತ್ತ ಕುಳಿತಿದ್ದರು. ಸೇಟರು ಬಂದೊಡನೆ ಅವರನ್ನು ಆನಂದದಿಂದ ಸ್ವಾಗತಮಾಡಿದರು. ಸೇಟರನ್ನು ತೃಪ್ತಿಪಡಿಸುವದಕ್ಕಾಗಿ ಅನೇಕ ಫಲಾ ಹಾರ ಹಾಗು ಸೆರೆಯ ಸೀಸೆಗಳನ್ನು ಮುಂದಿಟ್ಟರು. ಸೇಟರಿಗೆ ಸೆರೆ ಸೇರು ತ್ತಿರಲಿಲ್ಲ. ಅದನ್ನು ಅವರು ಎಂದೂ ಕುಡಿದಿರಲಿಲ್ಲ. ಅವರು ಒಂದೆರಡು ಹಣ್ಣುಗಳನ್ನು ಮಾತ್ರ ತಿಂದರು. ಸೆರೆ ಕುಡಿಯುವ ರೂಢಿಯಿಲ್ಲವೆಂದು ಹೇಳಿದ್ದರಿಂದ ದುರಂಧರ, ಕಮಾಲರು ಎಲ್ಲ ಸೀಸೆಗಳನ್ನು ತಾವೇ ಬರಿದು ಮಾಡಿದರು.

ಅವರಿಬ್ಬರು ನಿಸೆಯ ಪರಿಣಾಮದಿಂದ ನಾಲ್ಕೈದು ನಿಮಿಷಗಳಲ್ಲಿ ಎಚ್ಚರತಪ್ಪಿ ಮಲಗಿದರು. ಆಗ ಒಳಗಿನಿಂದ ಸಾವಕಾಶವಾಗಿ ಬಿಕ್ಕಿ ಬಿಕ್ಕಿ ಅಳುವ ಧ್ವನಿಯು ಕೇಳಿಸಿತು. ಸೇಟರು ಮೃದುವಾದ ಹೃದಯವುಳ್ಳವ ರಾದುದರಿಂದ ಅಳುವವರಾರೆಂಬುದನ್ನು ನೋಡಲು ಒಳಗೆ ಹೋದರು. ಒಂದು ಕೋಣೆಯ ಮೂಲೆಯಲ್ಲಿ ಒಬ್ಬ ತರುಣಿಯು ಅವಿತುಕೊಂಡು ಕುಳಿತಿದ್ದಾಳೆ. ಆವಳ ಕಣ್ಣಿನಿಂದ ತಡೆಯಿಲ್ಲದೆ ಕಂಬನಿಗಳು ಉದುರು ತ್ತಿವೆ. ಅವಳು ತಪ್ಪಿಸಿಕೊಂಡು ಹೋಗದಂತೆ ಅವಳ ಎರಡೂ ಕೈಗಳೂ

ಕಾಲುಗಳೂ ಸರಪಳಿಯಿಂದ ಕಟ್ಟಲ್ಪಟ್ಟವೆ. ಅವಳ ಮುಖವು ಸೂರ್ಯ ನಿಂದ ಅಗಲಿದ ಕಮಲದಂತೆ ಬಾಡಿಹೋಗಿದೆ. ಇಂಥ ಕನಿಕರ ಸ್ಥಿತಿಯನ್ನು ನೋಡಿದೊಡನೆ ಸೇಟರ ಮನಸ್ಸು ಕರಗಿ ನೀರಾಯಿತು. ಆಗ ಸೇಟರು ಅವಳ ಸಮೀಪಕ್ಕೆ ಹೋಗಿ, "ತಂಗೀ ಅಂಜಬೇಡ, ನಾನು ನಿನ್ನ ಕಷ್ಟ ಪರಿಹರಿಸುವೆ; ನೀನಾರು, ನಿನ್ನ ವೃತ್ತಾಂತವೇನು?" ಹೇಳೆಂದನು. ಆಗ ಮಾಧುರಿಯು "ಮಹಾಶಯರೇ ನಾನು ಪುಣೆಯ ಪಟ್ಟಣದ ವಿಠ್ಠಲ ದಾಸನ ಮಗಳು. ಹೊರಗೆ ಕುಳಿತಿರುವವರು ಅಲ್ಲಿಯವರೇ. ಅವರು ನನ್ನನ್ನು ಮದುವೆಯಾಗೆಂದು ಕೇಳುತ್ತಿರುವರು. ಪುಣೆಯಿಂದ ನನ್ನನ್ನು ಬಲಾತ್ಕಾರದಿಂದ ಇಲ್ಲಿಗೆ ತಂದಿರುವರು. ನನ್ನನು ತರುವಾಗ ನನ್ನ ಮನೆಯ ಆಳುಗಳಿಗೆ ಗುಂಡಿಕ್ಕಿ ಅವರಿಗೆ ಗಾಯಪಡಿಸಿದರು."

ಸೇಟರು - ಮುಂದೆ ಪುಣೆಯಿಂದ ನಿನ್ನನ್ನು ಹೇಗೆ ಕರೆದುಕೊಂಡು ಬಂದರು?

ಮಾಧುರಿ—ಮುಂದೆ ಪುಣೆಯಿಂದ ಮೋಟರಿನಲ್ಲಿ ನನ್ನನ್ನು ಜೊಂಬಾಯಿಗೆ ತಂದರು. ಅಲ್ಲಿಂದ ವಿಮಾನದ ಮೂಲಕ ಇಲ್ಲಿಗೆ ಕರೆತಂದರು. ನನ್ನನ್ನು ಅವರು ಕಠಿಣವಾದ ಆತಂಕಿನಲ್ಲಿಟ್ಟಿರುವರು. ನಾನು ಬೇಡರ ಬಲೆಯಲ್ಲಿ ಬಿದ್ದ ಎರಳೆಯಂತೆಯೂ, ಚಾಂಡಾಲರ ಕೈಯಲ್ಲಿ ಸಿಕ್ಕಿದ ಶಿಶುವಿನಂತೆಯೂ, ಕಾಗೆಗಳ ಹಿಂಡಿನ ಹಿಂಸೆಗೊಳಗಾದ ಕೋಗಿಲೆಯಂತೆಯೂ, ಗರುಡ ಪಕ್ಷಿಯ ಪಂಜರದಲ್ಲಿ ಸಿಲುಕಿದ ಗಿಳಿಯಂತೆಯೂ ಇದ್ದೇನೆ. ನಾಳಿನ ದಿನ ನನ್ನನ್ನು ರಿಜಿಸ್ಟರ ವಿಧಾನ ದಿಂದ ಲಗ್ನಮಾಡಿಕೊಳ್ಳುವದಾಗಿ ತಿಳಿಯುವದು. ಇದು ನನ್ನ ಇಚ್ಛೆಗೆ ವಿರೋಧವಾದುದು. ಆದರೆ ಇದನ್ನು ತಡೆಯುವವರಾರು! ನನ್ನ ಆತ್ಮಗೌರ ವವನ್ನು ಕಾಯುವವರಾರು! ದೇವರಿಗೆ ನನ್ನ ಮೇಲೆ ಕರುಣೆವುಂಟಾದರೆ ಮಾತ್ರ ನನ್ನ ವಿಪತ್ತು ಪರಿಹಾರವಾಗುವದು ಸಾಧ್ಯ" ಹೀಗೆಂದು ಅವಳು ಸಾವಕಾಶವಾಗಿ ನುಡಿದಳು.

ಈ ವೃತ್ತಾಂತವನ್ನೆಲ್ಲ ಕೇಳಿದ ಸೇಟರಿಗೆ ಕ್ಷಣಕಾಲ ದುಃಖಾ ಶ್ಚರ್ಯಗಳುಂಟಾದುವು. ದುಃಖವೇಕಾಯಿತೆಂದರೆ ಅವಳ ತಂದೆಯಾದ ವಿಠ್ಠಲದಾಸರು ಸೇಟರ ಪರಮ ಸ್ನೇಹಿತರು. ವ್ಯವಹಾರದ ದೃಷ್ಟಿ

ಯಿಂದಲೂ ಸೇಟರ ಸಂಗಡ ವಿಠ್ಠಲ ದಾಸನ ಸಂಬಂಧವು ಆ ವೇಳೆಯಲ್ಲಿ ಸಹ ಇದ್ದಿತು. ಪತ್ರ ವ್ಯವಹಾರಗಳು ಆಗಾಗ್ಗೆ ನಡೆಯುತ್ತಲೇ ಇದ್ದವು. ಸೇಟರಿಗೆ ಆಶ್ಚರ್ಯವೇಕಾಯಿತೆಂದರೆ ಬಲವಾದ ಕಾವಲುಳ್ಳ ವಿಠ್ಠಲ ದಾಸನ ಮನೆಯಿಂದ ಇಂಥ ಅಸಾಧ್ಯ ಅಪಹರಣವು ಹೇಗಾಯಿತೆಂಬುದು. ಸೇಟರು ಕುಶಲ ಬುದ್ಧಿಯುಳ್ಳವರಾದುದರಿಂದ ಅವರು ಮಾಧುರಿಗೆ ಅಭಯವನ್ನು ಕೊಟ್ಟು ತಾನು ಅವಳ ಬಂಧಮುಕ್ತಮಾಡಲು ಸರ್ವ ಪ್ರಯತ್ನಮಾಡುವೆನೆಂದು ಹೇಳಿ ಹೊರಗಿನ ಪಡಸಾಲೆಗೆ ಬಂದರು. ಆಗಲೂ ಸಹ ದುರಂಧರ, ಕಮಾಲರು ಸುರಾಪಾನದ ನಿಸೆಯಿಂದ ಎಚ್ಚ ರಾಗಿರಲಿಲ್ಲ. ಸೇಟರು ತಾವು ಸಂಗಡ ಕರಕೊಂಡು ಬಂದ ಗುಮಾಸ್ತರಿಗೆ ಆ ರಾತ್ರಿ ಅಲ್ಲಿಯೇ ಇರಬೇಕೆಂದು ಕಿವಿಮಾತು ಹೇಳಿದರು. ಆ ಮೇಲೆ ಕೆಲವು ನಿಮಿಷಗಳಲ್ಲಿ ದುಂಧರ, ಕಮಾಲರು ಕಣ್ಣು ವರೆಸುತ್ತ ಎದ್ದು ಕುಳಿತರು.

ಸೇಟರು ಅವರನ್ನು ಕುರಿತು ಪ್ರೇಮದಿಂದ ಮಾತಾಡತೊಡಗಿ ದರು. "ಇಗೋ ನೋಡಿರಿ, ನಿಮ್ಮ ಸಲುವಾಗಿ ನಾಳೆ ಜರಗುವ ನೋಂದ ಕಚೇರಿಯ ಮದುವೆಗೆ ಎರಡು ಜನ ಸಾಕ್ಷಿದಾರರನ್ನು ಕರೆತಂದಿದ್ದೇನೆ. ಅವರನ್ನು ಇಲ್ಲಿಯೇ ನಾಳಿನವರೆಗೆ ನಿಮ್ಮಲ್ಲಿಟ್ಟುಕೊಳ್ಳಿರಿ. ಅವರು ನಿಮ್ಮ ಕಾರ್ಯ ತೀರುವವರೆಗೆ ನಿಮ್ಮಲ್ಲಿಯೇ ಇರುವರು. ನಿಮಗೆ ಮತ್ತೇನು ಸಹಾಯಬೇಕು?" ಎಂದು ಸೇಟರು ಅಂದರು. ಆಗ ದುರಂಧರನು ಆನಂದದಿಂದ "ಸ್ವಾಮಿ, ನಿಮ್ಮ ಉಪಕಾರ ಬಹಳವಾಯಿತು. ಇದರ ಹೊರತು ನಮಗೆ ಮತ್ತಾವ ಸಹಾಯವೂ ಬೇಡ" ಎಂದನು. ಆಗ ಸೇಟರು ಈಗ ರಾತ್ರಿ ಬಹಳಕಾಲವಾಯಿತು ನಾನು ಹೋಗುವೆ ಎಂದು ಹೇಳಿದರು. ಅವರು ಹೋಗುವಾಗ ತಮ್ಮ ಇಬ್ಬರು ಗುಮಾಸ್ತರನ್ನು ಓರೆಗೆ ಕರೆದು ಅವರು ರಾತ್ರಿಯಲ್ಲಿ ಅಲ್ಲಿಯೇ ಎಚ್ಚರದಿಂದ ಕಾವಲಿರ ಬೇಕೆಂದು ಅವರಿಗೆ ಅಪ್ಪಣೆಮಾಡಿ ಹೋದರು.

## ಪ್ರಕರಣ ೧೫

# ಮಾಧುರಿಯ ಬಂಧಮುಕ್ತತೆ

ವಿಠ್ಠಲದಾಸನು ಮುಂಬಯಿಗೆ ತಲುಪಿದ ಮೇಲೆ ಸುಮ್ಮನೆ ಕೂಡ್ರಲಿಲ್ಲ. ಹೃದಯದ ಕಳವಳ, ಮನಸ್ಸಿನ ಅಶಾಂತಿ, ಚಿತ್ತದ ಚಂಚಲತೆಗಳು ಅವನನ್ನು ಪ್ರತಿಕ್ಷಣದಲ್ಲಿ ಪೀಡಿಸಹತ್ತಿದವು. ಅವನು ವಾಸಮಾಡಿದ ಮಹಲು ಬಿಸಿಲಿನಿಂದ ಜೆಂದ ಮಳಲಿನಂತೆ ಕಾಲಿಟ್ಟು ನಿಲ್ಲಲು ಸಹಿಸದಂತಾಯಿತು. ಅವನು ಮಹಡಿಯಿಂದಿಳಿದು ಬೀದಿಗೆ ಬಂದನು. ಅಷ್ಟರಲ್ಲಿ ಒಬ್ಬನು ಸೈಕಲ್ ಗಾಡಿಯ ಮೇಲೆ ಮುಂಭಾಗದಲ್ಲಿ ಟಾಯಿಮ್ಸ ಪತ್ರಿಕೆಗಳ ಸಾವಿರಾರು ಪ್ರತಿಗಳನ್ನಿಟ್ಟು ಕೊಂಡು ಮಾರಲಿಕ್ಕೆ ಹೊರಟಿದ್ದನು. ಆ ಪತ್ರಿಕೆಯ ಮೇಲ್ಭಾಗದಲ್ಲಿ (Mysterious Kidnapping) "ಅಗಾಧವಾದ ಅಪಹರಣ" ಎಂಬ ದೊಡ್ಡ ಅಕ್ಷರಗಳ ತಲೆಬರಹವು ಅವನ ನೋಟಕ್ಕೆ ಬಿದ್ದಿತು. ಅದೇ ಬಡಬಡಿಕೆ, ಹವ್ಯಾಸದಲ್ಲಿದ್ದ ವಿಠ್ಠಲದಾಸನು ಆ ಸುದ್ದಿಯು ತನ್ನ ಪ್ರಿಯ ಪುತ್ರಿಯ ಸಂಬಂಧದ್ದಾಗಿರಬಹುದೆಂಬ ಕುತೂಹಲದಿಂದ ಟಾಯಿಮ್ಸದ ಒಂದು ಪ್ರತಿಯನ್ನು ಕೊಂಡುಕೊಂಡನು. ಬೀದಿಯಲ್ಲಿಯೆ ನಿಂತುಕೊಂಡು ಆ ಸುದ್ದಿಯನ್ನು ಓದಿದನು. ಅದರಲ್ಲಿ ಹಿಂದುಸ್ಥಾನದಿಂದ ಒಬ್ಬ ತರುಣನು ಒಬ್ಬ ತರುಣಿಯನ್ನು ಲಗ್ನಮಾಡಿಕೊಳ್ಳುವ ಉದ್ದೇಶ ದಿಂದ ತಂದಿರುವನೆಂತಲೂ, ಲಗ್ನವು ತರುಣಿಯ ಇಚ್ಛೆಗೆ ವಿರೋಧ ವಾದುದೆಂತಲೂ ದರ್ಬಾನ ಪಟ್ಟಣದಲ್ಲಿಯ ದಟ್ಟ ವಾರ್ತೆಯಿದೆಯೆಂತಲೂ ಆಫ್ರಿಕಾದಿಂದಬಂದ ಕೇಬಲ್ ಸುದ್ದಿಯಲ್ಲಿ ಪ್ರಸಿದ್ಧವಾಗಿತ್ತು.

ಇದನ್ನು ಓದಿ ಮುಗಿಸುವಷ್ಟರಲ್ಲಿ ಅದೇ ಸ್ಥಳಕ್ಕೆ ಒಬ್ಬ ತಂತಿಯ ಕಚೇರಿಯ ಸೇವಕನು ತಂತಿಯ ಸುದ್ದಿಯ ಪತ್ರವನ್ನು ಹಿಡಿದುಕೊಂಡು "ವಿಠ್ಠಲದಾಸರು ಇರುವ ಮನೆಯಾವದು" ಎಂದು ಕೇಳುತ್ತ ಬಂದು ನಿಂತನು. ಆಗ ವಿಠ್ಠಲದಾಸನು "ನಾನೇ ವಿಠ್ಠಲದಾಸ" ಎಂದು ಹೇಳಿದನು. ಸೇವಕನು ತಾರಿನ ಪಾಕೀಟನ್ನು ವಿಠ್ಠಲದಾಸನಿಗೆ ಕೊಟ್ಟು ಸಹಿ ತೆಗೆದು ಕೊಂಡು ಹೋದನು. ಅದನ್ನು ಒಡೆದು ನೋಡಲಾಗಿ ಅದು ಇಸ್ಮಾಯಿಲ

ಸೇಟರ ತಂತೀ ವಾರ್ತೆಯಿತ್ತು. ಅದರಲ್ಲಿಯ ಸಂಗತಿ ಹೀಗಿತ್ತು. "ದೇವರ ದಯೆಯಿಂದ ನಿಮ್ಮ ಮಗಳಾದ ಮಾಧುರಿಯು ದುಷ್ಟರ ಬಲೆಯಿಂದ ಬಿಡುಗಡೆಯಾಗಿದ್ದಾಳೆ. ಅವಳನ್ನು ಬಿಡಿಸಿಕೊಂಡು ನನ್ನ ಮನೆಗೆ ಕರೆದುಕೊಂಡು ಬಂದಿರುವೆ. ಅವಳು ನನ್ನ ಮಗಳೆಂದೇ ಭಾವಿಸಿದ್ದೇನೆ. ಅವಳ ಅಪಹರಣದಿಂದ ನೀವು ಮಹಾಚಿಂತೆಯಲ್ಲಿ ಮುಳುಗಿರಬಹುದು. ನಾಳಿನ ದಿನವೇ ನಾನು ಸ್ವತಃ ವಿಮಾನಮೂಲಕ ಅವಳನ್ನು ಕರಕೊಂಡುಬಂದು ಒಪ್ಪಿಸುವೆ. ತಲ್ಲಣಗೊಂಡ ನಿಮ್ಮ ಮನಸ್ಸು ಈ ಸುದ್ದಿಯನ್ನು ಕೇಳಿ ಸಮಾಧಾನ ಹೊಂದುವದೆಂದು ನಂಬಿದ್ದೇನೆ.

ತಮ್ಮ ಪ್ರಿಯ ಮಿತ್ರ,

**ಇಸ್ಮಾಯಿಲ ಸೇಟ.**

ಈ ವಾರ್ತೆಯನ್ನು ಓದಿದೊಡನೆ ಈ ಮೊದಲು ಕಳವಳದಿಂದ ಕಂದಿದ್ದ ದಾಸರ ಮುಖವು ಸೂರ್ಯೋದಯ ಕಾಲದಲ್ಲಿ ಬಾಡಿದ ಕಮಲವು ಚೇತರಿಸಿಕೊಂಡು ಕಾಂತಿಮಯವಾಗುವಂತೆ ಹರ್ಷದಿಂದ ಉಬ್ಬಿತು. ಕಣ್ಣುಗಳಿಂದ ಆನಂದದ ಹನಿಗಳು ಉದುರಿದವು. ತನ್ನ ಮಗಳು ಸುರಕ್ಷಿತವಾಗಿರುವದಾಗಿಯೂ ಮತ್ತು ತನ್ನ ಪರಮಸ್ನೇಹಿತನ ವಶಕ್ಕೆ ಬಂದಿರುವದೆಂಬ ವಾರ್ತೆಯೂ ಅವನ ವ್ಯಸನವನ್ನು ತೆಗೆದೊಗೆದವು. ಈ ಸಂತೋಷದ ಸುದ್ದಿಯನ್ನು ತನ್ನ ಪರಿವಾರದವರಿಗೆ ತಿಳಿಸಬೇಕೆಂಬ ಕುತೂಹಲದಿಂದ ದಾಸನು ಮಿಂಚಿನವೇಗದಿಂದ ಮಹಡಿಯನ್ನೇರಿದನು ವಿಠ್ಠಲದಾಸರು ಕೆಳಗಿಳಿದು ಹೋಗುವಾಗ ತಾವು ಎಲ್ಲಿಗೆ ಹೋಗುತ್ತೇವೆಂದು ಪರಿವಾರದವರಿಗೆ ಹೇಳಿರಲಿಲ್ಲ. ಅಥವಾ ಅವರು ಹೊರಗೆ ಹೋಗಿರುವರೆಂಬದು ಸಹ ಅವರಿಗೆ ತಿಳಿದಿರಲಿಲ್ಲ. ಅವರ ಕೋಣೆಯು ಪ್ರತ್ತ್ಯೇಕವಾಗಿತ್ತು. ಅವರು ಮಹಡಿಯಿಂದ ಇಳಿದು ಹೋದ ಮೇಲೆ ಪರಿವಾರದವನೊಬ್ಬನು ಅವರ ಕೋಣೆಗೆ ಫಲಾಹಾರ, ಚಹಾ ಕೊಡಲು ಹೋದಾಗ ದಾಸರು ಅಲ್ಲಿರಲಿಲ್ಲ. ಆಗ ಅವನು ಉಳಿದವರೊಂದಿಗೆ ಮಹಡಿಯ ಎಲ್ಲ ಕಡೆಗಳಲ್ಲಿ ದಾಸರನ್ನು ಹುಡುಕಿದರೂ ಅವರ ಸುಳಿವೇ ಇರಲಿಲ್ಲ. ಅವರಿಗೆ ಭಯವೆನಿಸಿತು. ಯಾಕೆಂದರೆ

ದಾಸರು ನಿದ್ರೆಯಲ್ಲಿರುವಾಗಲೂ, ಎಚ್ಚರಿರುವಾಗಲೂ "ಮಾಧುರಿ, ಮಾಧುರಿ" ಎಂದು ಕನವರಿಸುತ್ತಿದ್ದರು. ಆದುದರಿಂದ ಅವರು (ದಾಸರು) ದುಃಖ ಸಹಿಸಲಾರದೆ ಸಮುದ್ರದಲ್ಲಿ ಧುಮುಕಿ ಪ್ರಾಣ ಬಿಟ್ಟರೋ ಅಥವಾ ಮತ್ತಾವ ರೀತಿಯಿಂದಾದರೂ ಪ್ರಾಣಘಾತಮಾಡಿಕೊಂಡರೋ ಎಂಬ ಚಿಂತೆಯಲ್ಲಿದ್ದರು.

ಇಷ್ಟರಲ್ಲಿ ಮಹಡಿಯ ಪಾವಟಿಗೆಯ ಮೇಲೆ ರಪ್ ರಪ್ ಎಂಬ ದೊಡ್ಡ ಸಪ್ಪಳವು ಕೇಳ ಬಂದಿತು. ಪರಿವಾರದವರು ಒಮ್ಮೆಲೇ ಸೋಪಾನದ ಬಾಗಿಲಿಗೆ ಬಂದು ನಿಲ್ಲುವಷ್ಟರಲ್ಲಿ ದಾಸರು ಕೈಯಲ್ಲಿ ತಂತಿಯ ಪತ್ರವನ್ನು ಹಿಡಿದುಕೊಂಡು ಮುಗುಳುನಗುತ್ತ ಬರುವದನ್ನು ಕಂಡರು. ದಾಸರು ಆನಂದದಿಂದ ತುಂಬಿದ್ದರಿಂದ ಅವರ ಗಂಟಲಿನಿಂದ ಮಾತುಗಳು ಹೊರಡದಾದವು. ತಂತಿಯ ವಾರ್ತೆಯನ್ನು ಪರಿವಾರದವರಿಗೆ ತೋರಿಸಿ ಕೆಲಹೊತ್ತು ಸುಮ್ಮನೆ ನಿಂತರು. ಪರಿವಾರದವರಲ್ಲೊಬ್ಬನು ಆ ವಾರ್ತೆಯನ್ನೋದಿ ಎಲ್ಲರಿಗೆ ಅದರ ಸಂಗತಿಯನ್ನು ತಿಳಿಸಿದನು. ಆಗ ಎಲ್ಲರೂ ಆನಂದದಿಂದ "ಜಯ ಶಂಕರ" ಎಂದು ಗಟ್ಟಿಯಾಗಿ ಧ್ವನಿ ಮಾಡಿದರು.

ಇತ್ತ ದರ್ಬಾನದಲ್ಲಿ ನಡೆದ ವಿಷಯವನ್ನು ಅರಿತುಕೊಳ್ಳಲು ಓದುಗರು ಕೂತೂಹಲವುಳ್ಳವರಾಗಿರಬಹುದು. ಇಸ್ಮಾಯಿಲ ಸೇಟರು ದುರಂಧರನ ವಸತಿ ಗೃಹದಿಂದ ರಾತ್ರಿ ಹೊರಟು ಹೋದ ಮೇಲೆ ಮಾಧುರಿಯ ಅಪಹರಣದ ವರದಿಯನ್ನು ಪೋಲೀಸ ಕಚೇರಿಗೆ ತಿಳಿಸಬೇಕೆಂದು ಬಯಸಿದರು. ಕಚೇರಿಗೆ ಅವರು ಹೋದಾಗ ಅದೇ ಆಗ ಫೌಜದಾರನು ಪಟ್ಟಣದಲ್ಲಿಯ ಪೋಲೀಸರ ಕಾರ್ಯಕ್ರಮ, ಜಾಗ್ರತೆಗಳನ್ನು ಪರಿಷ್ಕಾರ ಮಾಡಿಕೊಳ್ಳಲು ಬಂದಿದ್ದರು. ಸೇಟರು ಅವರನ್ನು ಕಂಡು ಅಪಹರಣದ ಎಲ್ಲ ಸಂಗತಿಯನ್ನು ವಿಸ್ತರಿಸಿ ಹೇಳಿದರು. ಫೌಜದಾರನು ಸೇಟರನ್ನು ಮರುದಿನ ರಿಜಿಸ್ಟ್ರಾರರ ಕಚೇರಿಗೆ ೧೧ ಘಂಟೆಗೆ ಬರಹೇಳಿದರು. ದುರಂಧರನು ಲಗ್ನದ ಸಿದ್ಧತೆಯಿಂದ ಕಮಾಲನೊಂದಿಗೆ ಮತ್ತು ಮಾಧುರಿಯೊಡನೆ ಮೋಟಾರಿನಲ್ಲಿ ಕುಳಿತುಕೊಂಡು ಸೇಟರು ಇರಿಸಿ ಹೋದ ಇಬ್ಬರು ಗುಮಾಸ್ತರನ್ನು ಸಹ ಸಂಗಡ ಕರೆದುಕೊಂಡು

ವೈಭವದ ಉಡುಪಿನಲ್ಲಿ ರಿಜಿಸ್ಟ್ರಾರರ ಕಚೇರಿಗೆ ತಲುಪಿದನು. ಅದೇ ವೇಳೆಗೆ ಅಲ್ಲಿಗೆ ಸೇಟರೂ ಬಂದರು. ಫೌಜದಾರನು ನಾಲ್ಕು ಜನ ಪೋಲೀಸರೊಂದಿಗೆ ಸಾದಾ ಬಟ್ಟೆಗಳನ್ನು ಹಾಕಿಕೊಂಡು ಅತಿಥಿಗಳೇನೋ ಅನ್ನುವಂತೆ ಕಚೇರಿಯ ಆಸನಗಳಲ್ಲಿ ಬಂದು ಕುಳಿತಿದ್ದರು. ರಿಜಿಸ್ಟ್ರಾರನು ೧೧ ಘಂಟೆಗೆ ಸರಿಯಾಗಿ ತನ್ನ ಉನ್ನತವಾದ ಕುರ್ಚಿಯ ಮೇಲೆ ಬಂದು ಕುಳಿತನು. ಮಾಧುರಿ, ದುರಂಧರ, ಕಮಾಲರು ಉದ್ದವಾದ ಒಂದೇ ಆಸನದಲ್ಲಿ ಕುಳಿತುಕೊಂಡರು. ಮಾಧುರಿಯು ಮುಖವನ್ನು ತಗ್ಗಿಸಿಕೊಂಡು ಕಣ್ಣೀರು ಸುರಿಸುತ್ತಿದ್ದುದು ರಿಜಿಸ್ಟ್ರಾರನ ದೃಷ್ಟಿಗೆ ಬಿದ್ದಿತು. ಈ ನೋಟವು ಅವನ ಮನಸ್ಸಿನಲ್ಲಿ ಒಂದು ಬಗೆಯ ಸಂಶಯವನ್ನುಂಟುಮಾಡಿತು. ಆ ಮೇಲೆ ದುರಂಧರನು ಆಸನದಿಂದ ಮೇಲಕ್ಕೆದ್ದು ರಿಜಿಸ್ಟ್ರಾರರನ್ನು ಕುರಿತು "ಸಾಹೇಬ, ಇಂದು ನಾನು ಈ ಕುಮಾರಿಯನ್ನು ಲಗ್ನವಾಗಲಿಚ್ಛಿಸುತ್ತೇನೆ. ಇದಕ್ಕಾಗಿ ಇಲ್ಲಿ ಕುಳಿತಿರುವ ಸೇಟರು ಮತ್ತು ಉಳಿದ ಇಬ್ಬರು ಅದಕ್ಕೆ ಸಾಕ್ಷಿಗಳಿದ್ದಾರೆ. ಈ ವಿವಾಹವನ್ನು ತಾವು ನೋಂದ ಮಾಡಿಕೊಳ್ಳಬೇಕೆಂದು ಬೇಡುತ್ತೇನೆ." ಎಂದನು.

ಆಗ ರಿಜಿಸ್ಟ್ರಾರನು ಕುಮಾರಿಯ ಕಡೆಗೆ ತನ್ನ ನೋಟವನ್ನು ಹರಿಸಿ "ತಂಗೀ ನೀನು ಈ ವರನನ್ನು ಲಗ್ನಮಾಡಿಕೊಳ್ಳಲು ಒಪ್ಪುವಿಯಾ?" ಎಂದು ಕೇಳಿದನು. ಅದನ್ನು ಕೇಳಿ ಮಾಧುರಿಯು ಗಟ್ಟಿಯಾಗಿ ಬಿಕ್ಕಿ ಬಿಕ್ಕಿ ಅಳಹತ್ತಿದಳು. ದುಃಖದ ಆವೇಶದಲ್ಲಿ ಅವಳು ತನ್ನ ಹೃದ್ಗತವನ್ನು ಹೊರಪಡಿಸಲು ಶಕ್ತಳಾಗಲಿಲ್ಲ. ಆಗ ಇಸ್ಮಾಯಿಲ ಸೇಟರು ಮೇಲಕ್ಕೆದ್ದು ಆ ಕುಮಾರಿಯು ಪುಣೆ ಪಟ್ಟಣದ ತನ್ನ ಪರಮ ಮಿತ್ರನಾದ ವಿಠ್ಠಲದಾಸನ ಮಗಳೆಂದೂ, ಅವಳನ್ನು ಬಲಾತ್ಕಾರದಿಂದ ವರನೆಂದು ಹೇಳಿಕೊಳ್ಳುವ ಈತನು ಇಲ್ಲಿಗೆ ಅಪಹರಿಸಿಕೊಂಡು ಬಂದಿರುವನೆಂದೂ, ಹಾಗೆ ಅಪಹರಿಸಿ ತರುವಾಗ ಅಲ್ಲಿ ಕೆಲವರಿಗೆ ಗುಂಡಿನೇಟುಗಳಿಂದ ಸಾವು ನೋವುಗಳನ್ನುಂಟುಮಾಡಿ ಅಪರಾಧ ಮಾಡಿರುವರೆಂದೂ ಈ ಸಂಗತಿಯನ್ನು ತಾನು ಹಿಂದಿನ ದಿನ ರಾತ್ರಿ ಈ ಕುಮಾರಿಯ ಬಾಯಿಂದ ಕೇಳಿರುವೆನೆಂದೂ ಹೇಳಿದನು. ಆಗ ರಿಜಿಸ್ಟ್ರಾರನು ಈ

ಮಾತಿನ ನಿದರ್ಶನ ಮಾಡಿಕೊಳ್ಳಲು, "ಈ ಸಂಗತಿಯು ನಿಜವೇ" ಎಂದು ಮಾಧುರಿಗೆ ಪ್ರಶ್ನೆಮಾಡಿದನು. ಅವಳು "ಅಹುದು" ಎಂದು ತಲೆಹಾಕಿದಳು. ಹಿಂದಿನ ರಾತ್ರಿ ದುರಂಧರನ ವಸತಿಗೃಹದಲ್ಲಿ ಉಳಿದ ಸೇಟರ ಇಬ್ಬರು ಗುಮಾಸ್ತರು ಸಹ ಮಾಧುರಿಯ ಕೈಕಾಲುಗಳಿಗೆ ಸರಪಳಿ ಬಿಗಿದು ಅವಳನ್ನು ಬಂಧನದಲ್ಲಿಟ್ಟದ್ದನ್ನು ವಿವರಿಸಿದರು.

ಈ ಸಂಗತಿಯನ್ನು ಕೇಳಿದ ರಿಜಿಸ್ಟ್ರಾರನು ದುರಂಧರನನ್ನು ಕುರಿತು, "ಏನು ಹೇಳುವಿ, ಈ ಸಂಗತಿ ನಿಜವೋ ಹೇಗೆ?" ಎಂದು ಕೇಳಿದನು. ದುರಂಧರನು ತನ್ನ ಅಪರಾಧವು ಹೊರಬಿದ್ದುದನ್ನು ಕಂಡು ಭ್ರಮಿತನಾದಂತೆ ನಿರುತ್ತರನಾಗಿ ನಿಂತುಕೊಂಡನು. ಆಗ ರಿಜಿಸ್ಟ್ರಾರನು ನೀನು ಉತ್ತರ ಕೊಡದೇ ಇರುವದು ನಿನ್ನ ಅಪರಾಧವನ್ನು ನೀನು ಒಪ್ಪಿಕೊಳ್ಳುವದಕ್ಕೆ ಆಧಾರವಾಗಿದೆ. ಆದುದರಿಂದ ನಿನ್ನನ್ನು ವಿಚಾರಣೆಗಾಗಿ ಪೋಲೀಸ್ ಅಧಿಕಾರಿಯ ಸ್ವಾಧೀನ ಮಾಡುವೆ" ಎಂದನು. ಇದನ್ನೆಲ್ಲ ಕೇಳುತ್ತ ಕುಳಿತಿದ್ದ ಫೌಜದಾರ ಮತ್ತು ನಾಲ್ಕು ಜನ ಪೋಲೀಸರು ತಮ್ಮ ಕೈಚೀಲಗಳಲ್ಲಿ ಬಚ್ಚಿಟ್ಟ ಅಧಿಕಾರ ಮುದ್ರೆಯ ಬಟ್ಟೆಗಳನ್ನು ಹೊರ ತೆಗೆದು ಧರಿಸಿಕೊಂಡು ದುರಂಧರ ಮತ್ತು ಕಮಾಲರಿಬ್ಬರನ್ನೂ ಕೈದುಮಾಡಿದರು. ಅವರ ಅಪರಾಧದ ವಿಚಾರಣೆಯಾಗುವವರೆಗೆ ಮಾಧುರಿಯನ್ನು ರಿಜಿಸ್ಟ್ರಾರನು ಇಸ್ಮಾಯಿಲ ಸೇಟರು ತಮ್ಮ ರಕ್ಷಣೆಯಲ್ಲಿಟ್ಟುಕೊಳ್ಳಬಹುದೆಂತಲೂ ಅಥವಾ ಅವಳನ್ನು ಅವಳ ತಂದೆಯ ಹತ್ತರ ಕಳಿಸಬಹುದೆಂತಲೂ ಹೇಳಿದನು. ಸೇಟರು ಅದಕ್ಕೆ ಒಪ್ಪಿಕೊಂಡು ಮಾಧುರಿಯನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು.

ಫೌಜದಾರನು ಕೈದು ಮಾಡಿದ ಆರೋಪಿಗಳನ್ನು ಪೋಲೀಸ ಸೆರೆಮನೆಯಲ್ಲಿರಿಸಿ ಅವರ ಅಪರಾಧದ ಮುಚ್ಚಳಿಕೆಯನ್ನು ತಯಾರಿಸಿ ಸಿಟಿ ಮ್ಯಾಜಿಸ್ಟ್ರೇಟರ ಕಡೆಗೆ ವರದಿ ಕಳಿಸಿದನು. ಸಿಟಿ ಮ್ಯಾಜಿಸ್ಟ್ರೇಟನು ಅದನ್ನು ಸಿರೀಕ್ಷಿಸಿ ಅಪರಾಧವು ಪುಣೆಯಲ್ಲಿ ಜರುಗಿರುವದರಿಂದ ಅಪರಾಧಿಗಳು ಅಲ್ಲಿಯೇ ವಿಚಾರಣೆಗೆ ಪಾತ್ರರಿರುವದರಿಂದ ಅವರನ್ನು ಪುಣೆಗೆ ಕಳುಹಿಸಬೇಕೆಂದು ಆಜ್ಞೆ ಮಾಡಿದನು.

ಇಸ್ಮಾಯಿಲ ಸೇಟರು ವಿಠ್ಠಲದಾಸರಿಗೆ ತಂತಿಯಿಂದ ತಿಳಿಸಿದ ಮೇರೆಗೆ ಮರುದಿನ ಮಾಧುರಿಯನ್ನು ಕರೆದುಕೊಂಡು ವಿಮಾನ ಪ್ರಯಾಣಮಾಡಿ ಮುಂಬಯಿಗೆ ತಲುಪಿದರು. ಮಳೆಯನ್ನು ನಿರೀಕ್ಷೆ ಮಾಡುತ್ತಿರುವ ಚಾತಕ ಪಕ್ಷಿಯಂತೆ ವಿಮಾನ ನಿಲ್ದಾಣದಲ್ಲಿ ಕಾಯ್ದು ಕೊಂಡು ನಿಂತ ವಿಠ್ಠಲದಾಸನು ಸೇಟರ ಸಂಗಡ ವಿಮಾನದಿಂದಿಳಿದ ತನ್ನ ಮಗಳನ್ನು ಕಂಡೊಡನೆ ಹರ್ಷದಿಂದ ಅಪ್ಪಿಕೊಂಡನು. ಅಗಲಿಹೋದ ಪ್ರೀತಿಯ ಮಗಳನ್ನು ಕಂಡರೆ ಯಾರಿಗೆ ಆನಂದವಾಗದು! ಪ್ರೇಮ ವೆಂಬುದು ಪ್ರಾಣಿಗಳ ಜೀವನಾಧಾರ, ಸಾಮಾಜಿಕ ಸುಖದ ಮೂಲ ಸೂತ್ರ, ಬಂಧುವರ್ಗದ ನೆಮ್ಮದಿಯ ಅಡಿಗಲ್ಲು; ಪರರೊಡನೆ ಸಹಕರಿಸುವ ಬೀಜಮಂತ್ರ; ದೇವರ ಕೃಪೆ ಪಡೆಯುವ ಮುಖ್ಯ ಸಾಧನ. ಪ್ರೇಮ ಬಂಧನವಿಲ್ಲದಿರಲು ಜಗತ್ತು ಮರುಭೂಮಿಯಂತೆ ನಿಸ್ಸಾರವಾದದ್ದು, ಸ್ಮಶಾನದಂತೆ ಭಯಾನಕವಾದದ್ದು; ನಿರ್ಜನವಾದ ಕಾಡಿನಂತೆ ನಿರಾಶಾ ಜನಕನಾದದ್ದು.

ವಿಠ್ಠಲದಾಸನು ಆ ಮೇಲೆ ಇಸ್ಮಾಯಿಲ ಸೇಟರ ಹತ್ತರ ಬಂದು ಅವರು ತನ್ನ ಸಲುವಾಗಿ ತೋರಿಸಿದ ಮಿತ್ರಪ್ರೇಮ ಹಾಗು ಶ್ರಮವಹಿಸಿ ತನ್ನ ಮಗಳನ್ನು ರಕ್ಷಿಸಿ ತನ್ನ ವಶಕ್ಕೆ ಒಪ್ಪಿಸಿ ಮಹದುಪಕಾರ ಮಾಡಿ ದ್ದಕ್ಕೆ ಅವರನ್ನು ಬಹಳವಾಗಿ ಪ್ರಶಂಸೆಮಾಡಿದನು. ಸೇಟರನ್ನು ಆ ಮೇಲೆ ತನ್ನ ನಿವಾಸಕ್ಕೆ ಕರೆದೊಯ್ದು ಅವರನ್ನು ಆದರದಿಂದ ಉಪಚರಿಸಿದನು. ಮರುದಿನ ವಿಠ್ಠಲದಾನು ಸೇಟರೊಡನೆ ತನ್ನ ಪರಿವಾರ ಸಹಿತ ಪುಣೆಗೆ ಬಂದನು. ವಿಠ್ಠಲದಾಸನ ಬಂಧುಗಳು ಮಾಧುರಿಯ ಪುನರಾಗಮನ ವನ್ನು ಕಂಡು ಹಿರಿಹಿರಿ ಹಿಗ್ಗಿದರು. ನೆರೆಹೊರೆಯವರು ತಂಡತಂಡವಾಗಿ ಬಂದು ಮಾಧುರಿಯನ್ನು ಕಣ್ತುಂಬ ನೋಡಿ ಮರುಗಿದರು. ಪರರು ಈ ವಾರ್ತೆಯನ್ನು ಕೇಳಿ ದುಷ್ಟರು ಮಾಡಿದ ಅನಾಹುತವನ್ನು ನಿಷ್ಠುರವಾಗಿ ನಿಂದಿಸಿದರು. ದುಷ್ಟತನ, ಅನ್ಯಾಯ, ಹಿಂಸೆ, ಅಪ್ರಾ ಮಾಣಿಕತನ, ಮೋಸ ಮೊದಲಾದ ದುಷ್ಕೃತಿಗಳು ಚಿರಕಾಲ ನಿಲ್ಲಲಾ ರವು. ಸತ್ಯವೇ ಸ್ಥಿರವಾಗಿ ನಿಲ್ಲುವದು. ಸರಳತನ, ಪ್ರಾಮಾಣಿ ಕತನ, ಸೌಜನ್ಯ, ಸದ್ಗುಣಗಳು ಜನರ ಪ್ರೇಮಕ್ಕೆ ಆಸ್ಪದವಾಗುವವು.

ಇಂಥ ಸದ್ಗುಣಿಯ ವ್ಯವಹಾರವು ನಿರಾತಂಕವಾಗಿಯೂ, ಸಫಲವಾಗಿಯೂ ಸಾಗುವದು. ಕುಟಿಲ ವಿಚಾರ, ವಕ್ರ ವಚನ, ದುಷ್ಟ ವರ್ತನೆಗಳು ಜನರ ದ್ವೇಷಕ್ಕೆ ಕಾರಣವಾಗುವವು. ಇಂಥವನ ವ್ಯವಹಾರವು ಖಂಡಿತವಾಗಿ ಕಷ್ಟಾಗುವದಲ್ಲದೆ ಸಂಪೂರ್ಣ ನಿಷ್ಫಲವಾಗುವದು.

### ಪ್ರಕರಣ ೧೬

## ಅಪರಾಧ ವಿಚಾರಣೆ (Trial of offence)

ವಿಠ್ಠಲದಾಸನು ಪುಣೆಗೆ ತಲುಪಿದ ನಂತರ ಇಸ್ಮಾಯಿಲ ಸೇಟರೊಂದಿಗೆ ಪುಣೆಯ ಪೋಲೀಸ ಕಚೇರಿಗೆ ಹೋಗಿ ಜರುಗಿದ ಅಪರಾಧ ಹಾಗು ಆರೋಪಿಗಳು ದರ್ಬಾನದ ಪೋಲೀಸ ಸೆರೆಮನೆಯಲ್ಲಿ ಹಾಕಲ್ಪಟ್ಟ ಸಂಗತಿಗಳನ್ನು ವರದಿ ಮಾಡಿದನು. ಆ ಮೇಲೆ ಪೋಲೀಸ ಅಧಿಕಾರಿಯು ದರ್ಬಾನದಿಂದ ಕೈದಿಗಳನ್ನು ತರಲು ಅವಶ್ಯವಾದ ಲೇಖಿಯನ್ನು ಪಡೆದುಕೊಂಡು ದರ್ಬಾನಕ್ಕೆ ಹೋಗಿ ಕೈದಿಗಳನ್ನು ಪುಣೆಗೆ ತೆಗೆದುಕೊಂಡು ಬಂದನು. ದುರಂಧರ, ಕಮಾಲರ ಸಂಗಡ ಅಪರಾಧ ಮಾಡಿದ ವಾಘ ಮತ್ತು ಉಸ್ತಾದರೆಂಬವರು ತಪ್ಪಿಸಿಕೊಂಡು ಹೋಗಿದ್ದರು. ಉಸ್ತಾದನು ವಿಠ್ಠಲದಾಸನ ಸೇವಕನಾದ ಮಾರುತಿಯನ್ನು ಗುಂಡಿನಿಂದ ಹೊಡೆದು ಮರಣಕ್ಕೆ ಈಡುಮಾಡಿದ್ದನು. ದುರಂಧರ, ಕಮಾಲರ ಶಸ್ತ್ರದ ಇರಿತದಿಂದ ಗಾಯ ಹೊಂದಿದ ಸೇವಕರಾದ ದಗಡು, ಸಾವಂತರೆಂಬ ಇಬ್ಬರಲ್ಲಿ ದಗಡು ಎಂಬವನು ಸಾವಿಗೆ ತುತ್ತಾಗಿದ್ದನು. ಆದುದರಿಂದ ಆರೋಪಿಗಳ ಮೇಲೆ ಅಪರಾಧಕಾಯ್ದೆಯ ಕಲಮು ೩೦೨, ೩೬೦, ೩೬೩ನೇದವುಗಳನ್ವಯ ಸಾವು, ಅಪಹರಣಗಳ ಅಪರಾಧಗಳನ್ನು ಮಾಡಿದ ಆರೋಪವನ್ನು ಹೊರಿಸಲಾಯಿತು.

ಸಿಟಿ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಆರೋಪಿಗಳ ವಿಚಾರಣೆಯು ಪ್ರಾರಂಭವಾಯಿತು. ದುರಂಧರ, ಕಮಾಲರು ತಮ್ಮ ಅಪರಾಧವನ್ನು

ಒಪ್ಪಿಕೊಂಡರು. ನ್ಯಾಯಮೂರ್ತಿಯು ಕಾಯಿದೆ ವಿಧಾನ ಪೂರ್ವಕವಾಗಿ ವಿಠ್ಠಲದಾಸನ, ಮಾಧುರಿಯ ಹಾಗು ದಾಸರ ಸೇವಕ ಸಾವಂತ ಮೊದಲಾದವರ ಹೇಳಿಕೆಗಳನ್ನು ಬರೆದುಕೊಂಡು ಅಪರಾಧ ಘಟಿಸಿರುವದೆಂಬ ನಿರ್ಣಯಕ್ಕೆ ಬಂದು ಆ ಖಟ್ಲೆಯನ್ನು ಸೆಶ್ಶನ್ಸ ನ್ಯಾಯಾಲಕ್ಕೆ ವಿಚಾರಣೆಗಾಗಿ ವರ್ಗಾಯಿಸಿದನು. ಈ ಮೊದಲು ೯ನೆಯ ಪ್ರಕರಣದಲ್ಲಿ ಶಂಕರನು ಪುಣೆಯ ಜಿಲ್ಲೆಯ ಮತ್ತು ಸೆಶ್ಶನ್ಸ ಕೋರ್ಟಿನ ನ್ಯಾಯಾಧೀಶನಾಗಿ ನೇಮಿಸಲ್ಪಟ್ಟ ವಿಷಯವನ್ನು ಓದುಗರು ನೆನಪಿನಲ್ಲಿಟ್ಟಿರಬಹುದು. ಆತನು ನಿಷ್ಪಕ್ಷಪಾತಿಯೂ, ಬುದ್ಧಿವಂತನೂ ಆದ ನ್ಯಾಯಾಧೀಶನೆಂದು ಹೆಸರು ವಾಸಿಯಾಗಿದ್ದನು. ಆತನ ಗಂಭೀರ ಮುಖಮುದ್ರೆ ಹಾಗು ಶಿಸ್ತಿನ ಕ್ರಮದಿಂದ ನ್ಯಾಯಾಲಯದಲ್ಲಿ ವಕೀಲರೂ, ಪಕ್ಷಕಾರರೂ, ಪ್ರೇಕ್ಷಕರೂ ಸೌಜನ್ಯತೆಯಿಂದ ವರ್ತಿಸುತ್ತಿದ್ದರು.

ನ್ಯಾಯಾಲಯದ ಕಟ್ಟಡವು ಭವ್ಯವಾದುದು ಮೊಕದ್ದಮೆಗಳನ್ನು ವಿಚಾರಣೆ ಮಾಡುವ ಮಹಲು ವಿಸ್ತಾರವಾದದ್ದು. ಒಂದು ಪಕ್ಕದಲ್ಲಿ ಎತ್ತರವಾದ ಗದ್ದುಗೆ. ಅದರ ಮೇಲೆ ಅಂದವಾದದ್ದೊಂದು ಕುರ್ಚಿಯ ಆಸನ. ಆಸನದ ಮುಂದೆ ದೊಡ್ಡ ಮೇಜು. ಕೆಲವು ಅಡಿಗಳ ಅಂತರದಲ್ಲಿ ಸಾಕ್ಷಿದಾರರು ಹೇಳಿಕೆ ಕೊಡುವ ಕಟಾಂಜನ. ನ್ಯಾಯಾಧೀಶನ ಪೀಠದ ಎದುರಿನಲ್ಲಿ ಬಹಳ ಉದ್ದಗಲವಾದ ಮೇಜುಗಳು. ಅವುಗಳ ಸಮೀಪದಲ್ಲಿ ಕುರ್ಚಿಗಳ ಪಂಕ್ತಿಗಳು. ಅನೇಕ ಜನ ವಕೀಲರೂ, ಬ್ಯಾರಿಷ್ಟರರೂ, ಪ್ರೇಕ್ಷಕರೂ ಮಹಲಿನಲ್ಲಿ ಸೇರುವರು. ನ್ಯಾಯಾಲಯದಲ್ಲಿ ದುರಂಧರನ ಅಪರಾಧವು ವಿಚಾರಣೆಗೆ ಬಂದಿತು. ಕೇಳಲು ಕುತೂಹಲವುಳ್ಳ ಸಾವಿರಾರು ಜನರು ಕಿಕ್ಕಿರಿದು ಸೇರಿದರು. ತಪ್ಪಿಸಿಕೊಂಡು ಹೋದ ಆರೋಪಿಗಳಾದ ವಾಘ, ಉಸ್ತಾದರನ್ನು ಸಹ ಪೋಲೀಸರು ಶೋಧಮಾಡಿ ತಂದಿದ್ದರು. ನಾಲ್ಕು ಜನ ಆರೋಪಿಗಳನ್ನು ಒಂದು ಬೆಂಚಿನ ಮೇಲೆ ಕೂಡ್ರಿಸಿಕೊಂಡು ಪೋಲೀಸರು ಶಸ್ತ್ರಧಾರಿಗಳಾಗಿ ಜಾಗ್ರತರಾಗಿ ನಿಂತಿದ್ದರು. ಆರೋಪಿಗಳು ಯಮದೂತರ ಕೈಯಲ್ಲಿ ಸಿಲುಕಿದ ಪಾಪಿಷ್ಟರಂತೆ ಹತಚೇತಿಗಳಾಗಿದ್ದರು. ನ್ಯಾಯಾಧೀಶನು ಕರಿಯ ನಿಲುವಂಗಿಯನ್ನು ತಲೆಯ ಮೇಲೆ ಬಿಳಿಯ

ಕುಲಾಯುವನ್ನೂ ಧರಿಸಿಕೊಂಡು ಯಮಧರ್ಮರಾಯನಂತೆ ಕಾಣುತ್ತಿದ್ದನು. ನ್ಯಾಯಾಧೀಶನ ಬಲ ಪಕ್ಕದಲ್ಲಿರುವ ಸರಕಾರಿ ವಕೀಲನು ಚಿತ್ರಗುಪ್ತನಂತೆ ಖಟ್ಲೆಯ ಕಾಗದ ಪತ್ರಗಳನ್ನೆಲ್ಲ ಸೂಕ್ಷ್ಮವಾಗಿ ಶೋಧಿಸಿ ನ್ಯಾಯಾಧೀಶನಿಗೆ ಮನವರಿಕೆಮಾಡಿಕೊಡಲು ಸಿದ್ಧನಾಗಿ ನಿಂತಿದ್ದನು.

ಆರೋಪಿಗಳು ತಮ್ಮ ಪತಿಯಿಂದ ಒಬ್ಬ ಬ್ಯಾರಿಷ್ಟರರನ್ನು ನೇಮಿಸಿಕೊಂಡಿದ್ದರು. ಸರಕಾರೀ ವಕೀಲನು ಅಪರಾಧದ ಸಾರಾಂಶವನ್ನು ಈ ಪ್ರಕಾರ ವಿವರಿಸಿದನು:-

“ಮಾನ್ಯ ನ್ಯಾಯಾಧೀಶರೇ, ದುರಂಧರನ ಸಹಿತವಾಗಿ ನಾಲ್ಕು ಜನ ಆರೋಪಿಗಳು ಮೂರು ತಿಂಗಳ ಹಿಂದೆ ತಾ. ೧೦—೪—೧೯೪೦ನೇ ದಿವಸ ವಿಠ್ಠಲದಾಸರ ಮಗಳಾದ ಮಾಧುರಿಯನ್ನು ಹಿಂದೂಸ್ಥಾನದ ಹೊರ ಪ್ರದೇಶವಾದ ದರ್ಬಾನ ನಗರಕ್ಕೆ ಅವಳ ಇಚ್ಛೆಯ ವಿರೋಧವಾಗಿ ಬಲಾತ್ಕಾರದಿಂದ ಅಪಹರಿಸಿಕೊಂಡು ಒಯ್ದರು. ಹಾಗೆ ಮಾಡುವಾಗ ಅವರ ಕೃತಿಯನ್ನು ತಡೆಯಲು ಬಂದ ವಿಠ್ಠಲದಾಸರ ಸೇವಕರಲ್ಲಿ ಮಾರುತಿ, ದಗಡು ಎಂಬವರಿಗೆ ಸಾವನ್ನುಂಟುಮಾಡಿ ಸಾವಂತನೆಂಬವನಿಗೆ ನೋವನ್ನುಂಟುಮಾಡಿದರು. ದುರಂಧರನು ಈ ಅಪರಾಧಮಾಡುವಾಗ ಮಾಧುರಿಯನ್ನು ಅವಳ ಇಚ್ಛೆಯ ವಿರೋಧವಾಗಿ ಲಗ್ನವಾಗಬೇಕೆಂದು ಉದ್ದೇಶವುಳ್ಳವನಿದ್ದನು. ಅದನ್ನು ಸಾಧಿಸಲು ದರ್ಬಾನದ ರಿಜಿಸ್ತ್ರಾರರ ಕಚೇರಿಗೆ ಹೋದಾಗ ಆತನ ಅಪರಾಧವು ಪ್ರಕಟವಾದುದರಿಂದ ಅಲ್ಲಿ ಪೋಲೀಸರ ಕೈ ಸೆರೆಗೊಳಗಾದನು. ಆದುದರಿಂದ ಆರೋಪಿಗಳು ಸಾವು, ನೋವು, ಅಪಹರಣ ಮಾಡಿದ ಅಪರಾಧಗಳಿಗೆ ಕಲಮು ೩೦೨, ೩೬೦, ೩೬೩ ಮೊದಲಾದುವುಗಳ ಅನ್ವಯ ಶಾಸನಕ್ಕೆ ಗುರಿಯಾಗಿದ್ದಾರೆ.?”

ಈ ಪ್ರಕಾರ ಅಪರಾಧದ ಸ್ವರೂಪವನ್ನು ವಿವರಿಸಿದನಂತರ ನ್ಯಾಯಾಧೀಶನು ಆರೋಪಿಗಳನ್ನುದ್ದೇಶಿಸಿ, “ಈ ಅಪರಾಧ ಮಾಡಿದುದಕ್ಕೆ ನೀವು ಒಪ್ಪುವಿರಾ” ಎಂದು ಕೇಳಿದನು. ನಾಲ್ಕೂ ಜನ ಆರೋಪಿಗಳೂ ತಾವು ಅಪರಾಧ ಮಾಡಿಲ್ಲ ಎಂದು ಹೇಳಿದರು. ತಾವು ಮೆಜಿಸ್ಟ್ರೇಟರ

ಮುಂದೆ ಹೇಳಿದ ಒಪ್ಪಿಗೆಯು ಇಚ್ಛಾವಿರೋಧವಾದದ್ದೆಂದು ಹೇಳಿದಲ್ಲದೆ ಪೋಲೀಸರ ಒತ್ತಾಯಕ್ಕೆ ಕಾರಣವಾದದ್ದೆಂದು ನುಡಿದರು. ಹೀಗೆ ಆರೋಪಿಗಳು ತಮ್ಮ ಅನಪರಾಧದ ಸಮರ್ಥನೆಮಾಡಿಕೊಳ್ಳಲು ಸಿದ್ಧರಾದರು.

ಆ ಮೇಲೆ ಸರಕಾರಿ ವಕೀಲರು ತಮ್ಮ ಪುರಾವೆಯನ್ನು ಮಾಡಿಸಲು ಪ್ರಾರಂಭಿಸಿದರು. ಮೊದಲು ಮಾಧುರಿಯ ಹೇಳಿಕೆಯು ಪ್ರಾರಂಭವಾಯಿತು. ಸರಕಾರಿ ವಕೀಲರು "ಆರೋಪಿಗಳ ಪರಿಚಯವಿದೆಯೇ" ಎಂದು ಮಾಧುರಿಗೆ ಪ್ರಶ್ನೆಮಾಡಿದರು.

ಮಾಧುರಿ—"ಅಹುದು. ಇವರು ನಾಲ್ವರೂ ನಮ್ಮ ಮನೆಗೆ ಬಂದವರು. ಈತನು (ಉಸ್ತಾದ) ಪಿಸ್ತೂಲಿನಿಂದ ಮಾರುತಿಗೆ ಗುಂಡುಹಾಕಿದವನು. ಇವರಿಬ್ಬರು ( ದುರಂಧರ, ಕಮಾಲ ) ದಗಡು, ಸಾವಂತರನ್ನು ಕಿರುಗತ್ತಿಯಿಂದ ಇರಿದವರು. ಇವನು (ವಾಘ) ಸೇವಕರನ್ನು ಹೊಡೆದು ದೂಡಿದವನು. ೧ನೆಯ ಆರೋಪಿಯು (ದುರಂಧರ) ಅದಕ್ಕೂ ಮೊದಲು ನಾನು ಉಪವನಕ್ಕೆ ಹೋದಾಗ ಅಲ್ಲಿ ನನ್ನನ್ನು ನೋಡಿ ನನ್ನಮೇಲೆ ಮೋಹತಾಳಿದವನು. ಆ ಮೇಲೆ ನನ್ನನ್ನು ಲಗ್ನವಾಗುವ ಇಚ್ಛೆಯನ್ನು ವ್ಯಕ್ತಗೊಳಿಸಿ ನನಗೊಂದು ಪತ್ರಬರೆದಿದ್ದನು. ಇದೇ ಆ ಪತ್ರವು. ಅದಕ್ಕೆ ನಾನು ಒಪ್ಪಿಗೆಕೊಡದೆ ಇದ್ದುದರಿಂದ ೨ನೆಯ ಆರೋಪಿಯು ಮಂತ್ರ ತಂತ್ರಗಳಿಂದ ನನ್ನನ್ನು ಒಲಿಸಲು ಪ್ರಯತ್ನ ಮಾಡಿದನು. ಈ ಸಾಧನಕ್ಕಾಗಿ ನಮ್ಮ ಸೇವಕರನ್ನು ಸಹ ಅವನು ಒಲಿಸಿಕೊಂಡನು. ಮಂತ್ರ, ತಂತ್ರಗಳ ಮೂಲಕ ನಾನು ಕೆಲವು ಕಾಲ ಬುದ್ಧಿ ಭ್ರಮೆಯಿಂದ ಕಷ್ಟವನ್ನನುಭವಿಸಿದೆನು. ನನ್ನ ತಂದೆ ತಾಯಿಗಳು ಹದಿನೆಂಟು ದೇವರಿಗೆ ಹರಿಕೆಹೊತ್ತು ಹಲವಾರು ಔಷಧೋಪಚಾರಗಳಿಂದ ನನ್ನನ್ನು ಗುಣಪಡಿಸಿದರು. ಇವೆಲ್ಲ ಉಪಾಯಗಳು ಫಲಿಸದೆ ಇದ್ದುದರಿಂದ ಆರೋಪಿಗಳು ಬಲಾತ್ಕಾರಕ್ಕೆ ಮನಸ್ಸುಮಾಡಿದರು. ಅವರು ನನ್ನ ಕಡೆಗೆ ಪಿಸ್ತೂಲನ್ನು ಒಡ್ಡಿ ಬೆದರಿಸಿ ನಾನು ಅವರನ್ನು ಹಿಂಬಾಲಿಸುವಂತೆ ಮಾಡಿದರು. ನನ್ನನ್ನು ಮೋಟಾರಿನಲ್ಲಿ ಮುಂಬಯಿಗೆ

ಕರೆದೊಯ್ದು ಅಲ್ಲಿಂದ ವಿಮಾನದ ಮೂಲಕ ದರ್ಬಾನಕ್ಕೆ ಕರಕೊಂಡು ಹೋದರು.

ದರ್ಬಾನದಲ್ಲಿ ನನ್ನನ್ನು ಗುಪ್ತವಾಗಿ ಒಂದು ಮನೆಯಲ್ಲಿ ಕಠಿಣವಾದ ಬಂಧನದಲ್ಲಿಟ್ಟರು. ಅಲ್ಲಿ ಇಸ್ಮಾಯಿಲ ಸೇಟರು ನನ್ನ ದೈವವಶದಿಂದ ನಾನು ಬಂಧನದೊಳಗಿದ್ದ ಮನೆಗೆ ಬಂದರು. ಆರೋಪಿಗಳು ಸುರಾಪಾನದಿಂದ ಮದವೇರಿ ಮಲಗಿಕೊಂಡಾಗ ನಾನು ನನ್ನ ದುಃಖದ ಆವೇಶದಿಂದ ಬಿಕ್ಕಿ ಬಿಕ್ಕಿ ಅಳುವದನ್ನು ಕೇಳಿ ಸೇಟರು ನಾನಿದ್ದ ಕೋಣೆಗೆ ಬಂದರು. ಸರಪಳಿಯಿಂದ ಬಿಗಿಯಲ್ಪಟ್ಟ ನನ್ನ ಹೀನಸ್ಥಿತಿಯನ್ನು ಕಂಡು ದಯಾವಂತರಾದ ಸೇಟರು ನನ್ನ ವೃತ್ತಾಂತಕೇಳಿ ನನ್ನನ್ನು ಪಾರುಮಾಡಲು ವಚನವಿತ್ತರು. ಅವರು ಭೆಟ್ಟಿಯಾದ ಮರುದಿನ ನನ್ನ ಇಚ್ಛೆಯ ವಿರುದ್ಧ ಲಗ್ನವಾಗುವದಿತ್ತು. ಸೇಟರ ಸಾಹಸದಿಂದ ಲಗ್ನವು ತಪ್ಪಿಹೋಗಿ ಆರೋಪಿಗಳು ಲಗ್ನ ನೋಂದ ಆಗುವ ರಿಜಿಸ್ಟ್ರಾರನ ಕಚೇರಿಯಲ್ಲಿ ಪೋಲೀಸರ ವಶಕ್ಕೆ ಸಿಲುಕಿದರು." ಇಷ್ಟೇ ನಡೆದ ಸಂಗತಿಯೆಂದು ಹೇಳಿ ಮಾಧುರಿಯು ನಿಟ್ಟುಸಿರುಬಿಟ್ಟಳು.

ಬ್ಯಾರಿಸ್ಟರನ ಸವಾಲು— (ಮಾಧುರಿಯನ್ನು ಕುರಿತು) "ನೀನು ದುರಂಧರನನ್ನು ಉಪವನದಲ್ಲಿ ಕಂಡಾಗ ಅವನನ್ನು ಮೋಹಿಸಿದಿಯಲ್ಲವೇ?"

ಮಾಧುರಿ—"ನನಗೆ ಮೋಹದ ಕಲ್ಪನೆಯೇ ಇರಲಿಲ್ಲ. ಪರ ಪುರುಷರನ್ನು ನಾನು ಸಹೋದರರಂತೆ ಭಾವಿಸುತ್ತಿದ್ದೆನು."

ಬ್ಯಾರಿಸ್ಟರ—"ನೀನು ಯಾರನ್ನೂ ಲಗ್ನಮಾಡಿಕೊಳ್ಳುವ ಇಚ್ಛೆಯುಳ್ಳವಳಾಗಿರಲಿಲ್ಲವೇ?"

ಮಾಧುರಿ—ನಾನು ವಿದ್ಯಾವ್ಯಾಸಂಗದಲ್ಲಿ ತೊಡಗಿದ್ದೆನು. ಆಗ ಬೇರೆ ವಿಚಾರವೇ ನನಗಿರಲಿಲ್ಲ. ಮದುವೆಯು ಕಟ್ಟು ಸಂಸಾರದ ತಾಪಗಳಲ್ಲಿ ಧುಮುಕುವದಕ್ಕೆ ತೆರೆದಿಟ್ಟ ಬಾಗಿಲೆಂಬದು ನನ್ನ ಅರಿಕೆ. ಜಗತ್ತಿನಲ್ಲಿ ಜನ್ಮತಾಳಿಬಂದ ಮೇಲೆ ಜೀವಿಗಳಿಗೆ ಸಮಾಜದ ಕಟ್ಟುಗಳಿಗನುಸಾರವಾಗಿ ವರ್ತಿಸದಿರಲು ಸಾಧ್ಯವಿಲ್ಲ. ಆದರೆ ಬಾಲ, ಬಾಲಕಿ

ಯರು ಪ್ರಪಂಚದ ಅನುಭವವಿಲ್ಲದವರೂ, ಅಲ್ಪ ಬುದ್ಧಿಯವರೂ ಇರುವದರಿಂದ ಸ್ವಂತ ಬುದ್ಧಿಯಿಂದ ಸ್ವೇಚ್ಛಾಚಾರದಿಂದ ವರ್ತಿಸಿದಲ್ಲಿ ಅನರ್ಥಕ್ಕೆ ಗುರಿಯಾಗಬೇಕಾಗುವದು. ಕಾಮವಿಕಾರವುಳ್ಳವರು ಕುರುಡರಿಗೆ ಸಮಾನರು. ಅವರು ವಿಚಾರಶೂನ್ಯರು. ಇಂದ್ರಿಯಗಳ ಅಲ್ಪ ಸುಖಕ್ಕೆ ಆಶೆಮಾಡಿ ಅತಿಶಯವಾದ ದುಃಖಕ್ಕೆ ಈಡಾಗುವರು. ದೀಪದ ಹುಳದಂತೆ ದೀಪದ ಪ್ರಕಾಶಕ್ಕೆ ಮರುಳಾಗಿ ಜ್ವಾಲೆಯಲ್ಲಿ ಧುಮುಕಿ ಜೀವವನ್ನು ನೀಗುವರು. ಬಾಲ ಬಾಲಕಿಯರು ಗುರುಹಿರಿಯರ ಪಾಲನೆಯಲ್ಲಿರುವಾಗ ಅವರ ನಿರೂಪದಂತೆ ನಡೆಯುವದು ಅವರ ಕರ್ತವ್ಯ. ಅವರ ಅನುಮತಿಯಿಲ್ಲದೆ ಸ್ವೇಚ್ಛೆಯಿಂದ ವರ್ತಿಸಿದಲ್ಲಿ ದೊಡ್ಡಿಯಿಂದ ಪಾರಾಗಿ ಅಡವಿಗೆ ಹೋಗಿ ತೋಳದ ಬಾಯಿಗೆ ತುತ್ತಾದ ಕುರಿಮರಿಯಂತೆ ದುರಂತವು ತಪ್ಪದು.''

ಬ್ಯಾರಿಸ್ಟರ—"ನೀನು ದುರಂಧರನನ್ನು ಲಗ್ನವಾಗಲು ಒಪ್ಪಿದ್ದರೆ ನಿನ್ನ ತಂದೆಯು ಒಪ್ಪಿಗೆ ಕೊಡುತ್ತಿರಲಿಲ್ಲವೇ?"

ಮಾಧುರಿ—"ನನ್ನ ತಂದೆಯ ಒಪ್ಪಿಗೆಯಿಲ್ಲದೆ ನಾನು ಒಪ್ಪುವದು ಅಸಂಭವವು.''

ಬ್ಯಾರಿಸ್ಟರ—"ಆರೋಪಿಗಳು ನಿನ್ನನ್ನು ಕರೆದೊಯ್ಯುವಾಗ ನೀನು ಪ್ರತಿಭಟಿಸದೆ ಖುಷಿಯಿಂದ ಹೋದೆಯಲ್ಲವೇ!"

ಮಾಧುರಿ—''ಇಲ್ಲ, ಗುಂಡಿನೇಟಿನಿಂದ ಮರಣವುಂಟಾದೀತೆಂಬ ಭಯದಿಂದ ಅವರನ್ನು ಹಿಂಬಾಲಿಸಿದೆನು."

ಬ್ಯಾರಿಸ್ಟರ—''ಆರೋಪಿಗಳ ವಶದಲ್ಲಿರುವಾಗ ದುರಂಧರನನ್ನು ಲಗ್ನವಾಗಿ ಸುಖದಿಂದ ಇದ್ದರಾಯಿತು ಎಂದು ನೀನು ಮನಸ್ಸು ಮಾಡಿದಿಯಲ್ಲವೇ?''

ಮಾಧುರಿ—"ಎಂದೂ ಇಲ್ಲ. ಆಗಲೂ ನನ್ನ ಪ್ರಾಣ ಹೋಗುವ ಪ್ರಸಂಗ ಬಂದರೂ ನನ್ನ ಮನಸ್ಸನ್ನು ಬದಲು ಮಾಡುತ್ತಿರಲಿಲ್ಲ.''

ಈ ಮಾತು ಕೇಳಿ ಪ್ರೇಕ್ಷಕರು, ''ಶಹಬಾಸ್, ವೀರ ಕುಮಾರಿ'' ಎಂದು ಉದ್ಗಾರ ವ್ಯಕ್ತಮಾಡಿದರು. ಎಲ್ಲ ಪ್ರಶ್ನೆಗಳಿಗೆ ಪ್ರತಿಕೂಲ

ವಾದ ಉತ್ತರಗಳು ಬಂದದ್ದರಿಂದ ಬ್ಯಾರಿಷ್ಟರನು ಹೆಚ್ಚು ಪ್ರಶ್ನೆ ಕೇಳುವದು ವಿಹಿತವಲ್ಲವೆಂದು ತನ್ನ ಸವಾಲನ್ನು ನಿಲ್ಲಿಸಿದನು.

ಆ ಮೇಲೆ ವಿಠ್ಠಲದಾಸನ ಹೇಳಿಕೆ ಪ್ರಾರಂಭವಾಯಿತು. ದಾಸನು ಸರಕಾರಿ ವಕೀಲರ ಪ್ರಶ್ನೆಗೆ ಉತ್ತರ ಕೊಡುತ್ತ ದುರಂಧರನು ತಮ್ಮ ಮಗಳನ್ನು ವಧುವಾಗಿ ಕೊಡಲು ತಮಗೆ ಒಂದು ಪತ್ರ ಬರೆದಿದ್ದನೆಂತಲೂ, ಅದಕ್ಕೆ ಒಪ್ಪಿಗೆ ಕೊಡದಿರಲು ಬಲಾತ್ಕಾರದಿಂದ ಮಾಧುರಿಯನ್ನು ಅಪಹರಿಸಿದನೆಂತಲೂ ಎಲ್ಲ ನಡೆದ ಸಂಗತಿಯನ್ನು ತಿಳಿಸಿ ತನ್ನ ಮುತಾಲಿಕನ ವರದಿ ಮುಟ್ಟದ ಕೂಡಲೇ ಮನೆಗೆ ಬಂದೆನೆಂತಲೂ, ತಮ್ಮ ಸೇವಕರ ಸಾವುನೋವುಗಳನ್ನು ನೋಡಿದೆನೆಂತಲೂ ಹೇಳಿದನು.

ಬ್ಯಾರಿಸ್ಟರನು—"ಅಪರಾಧ ಜರುಗಿದಾಗ ನೀವು ಪ್ರತ್ಯಕ್ಷ ಹಾಜರ ಇರಲಿಲ್ಲ?"

ದಾಸರು—"ಇರಲಿಲ್ಲ."

ಬ್ಯಾರಿಸ್ಟರ--ಇದು ದುರಂಧರನ ಪತ್ರವೆಂಬದನ್ನು ಹೇಗೆ ಹೇಳುವಿರಿ?

ದಾಸ—"ಪತ್ರದ ಮೇಲ್ವಿಳಾಸವು ಮುದ್ರಣದಲ್ಲಿದೆ. ಕೆಳಗೆ ಅವನ ಸಹಿ ಇದೆ. ಟಪ್ಪಾಲುಮೂಲಕ ಬಂದದೆ. ಅಂಚೆ ಕಚೇರಿಯ ಮುದ್ರೆಯುಂಟು."

ಆ ಮೇಲೆ ದಾಸರ ಕಾವಲುಗಾರನ ಸಾಕ್ಷಿಯಾಯಿತು. ಅವನು ಆರೋಪಿಗಳ ಗುರುತು ಹಿಡಿದನು. ಅವರಲ್ಲಿ ಕಮಾಲನು ತನ್ನ ಪರಿಚಯ ಮಾಡಿಕೊಂಡು ತನಗೆ ಫಲಾಹಾರ, ಸುರಾಪಾನಗಳನ್ನು ಕೊಟ್ಟು ತನ್ನನ್ನು ಎಚ್ಚರದಪ್ಪುವಂತೆ ಮಾಡಿದ್ದನ್ನೂ ಕೆಲಹೊತ್ತಿನ ಮೇಲೆ ದಾಸರ ಮನೆಯೊಳಕ್ಕೆ ಉಳಿದವರೊಡನೆ ಪ್ರವೇಶಮಾಡಿ ಗುಂಡು ಹಾರಿಸಿದ್ದನ್ನೂ ಮೋಟರುಗಳಲ್ಲಿ ಕುಳಿತು ಹೋದದ್ದನ್ನೂ ವಿವರಿಸಿ ಹೇಳಿದನು. ತಾನು ಸುರಾಪಾನದ ಮಬ್ಬಿನಲ್ಲಿದ್ದುದರಿಂದ ಅವರನ್ನು ತಡೆಯಲು ಶಕ್ತನಾಗಿರಲಿಲ್ಲವೆಂಬದನ್ನೂ ಹೇಳಿದನು.

ಈ ಸಾಕ್ಷಿಯನಂತರ ದಾಸರ ಸೇವಕನಾದ ಸಾವಂತನ ಹೆಸರು ಕೂಗಲ್ಪಟ್ಟಿತು. ಸಾವಂತನು ಸಾಕ್ಷಿದಾರರ ಪೆಟ್ಟಿಗೆಯನ್ನೇರಿ ನಿಂತುಕೊಂಡನು.

ಸರಕಾರಿ ವಕೀಲರು—"ಈ ಆರೋಪಿಗಳು ನಿನಗೆ ಗೊತ್ತುಂಟೋ?

ಸಾವಂತ—"ಒಹೋ, ಚನ್ನಾಗಿ ನೆನಪಿಟ್ಟಿರುವೆ. ಇವರು ಆದಿನ ಒಮ್ಮೆಲೇ ಮನೆಯೊಳಗೆ ನುಗ್ಗಿದರು. ಮಾಧುರಿಯನ್ನು ಬೆದರಿಸಿದರು. ಇವರನ್ನು ಪ್ರತಿಭಟಿಸಿದ ಮಾರುತಿಗೆ ಗುಂಡಿಕ್ಕಿದರು. ಮಾರುತಿಯು ಕೂಡಲೇ ಪ್ರಾಣಬಿಟ್ಟನು. ನನ್ನನ್ನೂ, ದಗಡುನನ್ನೂ ಕಿರುಗತ್ತಿಯಿಂದ ಇರಿದರು. ದಗಡು ಆಸ್ಪತ್ರೆಯಲ್ಲಿ ಸತ್ತನು. ನಾನು ಉಪಚಾರದಿಂದ ಗುಣಹೊಂದಿದೆನು. ನಮ್ಮನ್ನು ಇರಿದಮೇಲೆ ಮಾಧುರಿಗೆ ಪಿಸ್ತೂಲಿನ ಭಯತೋರಿಸಿ ಅವಳನ್ನು ಕರೆದೊಯ್ದರು. ಸ್ವಲ್ಪ ವೇಳೆಯಲ್ಲಿ ಬಂದ ಮುತಾಲಿಕರು ಟೆಲಿಫೋನಿನಿಂದ ದಾಸರಿಗೆ ತಿಳಿಸಿದರು. ಅವರು ಬಂದೊಡನೆ ನಾನು ಎಲ್ಲ ಸಂಗತಿಯನ್ನೂ ಅವರಿಗೆ ವಿವರಿಸಿ ಹೇಳಿದೆನು."

ಬ್ಯಾರಿಸ್ಟರ—ಅಪರಾಧ ಘಟಿಸುವ ಮೊದಲು ನೀನು ಆರೋಪಿಗಳನ್ನು ನೋಡಿರಲಿಲ್ಲ ಅಥವಾ ಅವರು ದಾಸರಮನೆಗೆ ಬಂದದ್ದನ್ನು ನೋಡಿಲ್ಲ?"

ಸಾವಂತ—"ಇಲ್ಲ."

ಬ್ಯಾರಿಸ್ಟರ—"ಅಪರಾಧದ ದಿನ ಕತ್ತಲೆಯ ದಿನವಿತ್ತು"

ಸಾವಂತ—"ಅಹುದು. ಆದರೆ ಮನೆಯಲ್ಲಿ ವಿದ್ಯುತ್ತಿನ ದೀಪಗಳಿದ್ದವು. ಆರೋಪಿಗಳ ಮುಖಗಳು ಚನ್ನಾಗಿ ಕಾಣಿಸುತ್ತಿದ್ದವು"

ಬ್ಯಾರಿಸ್ಟರ—"ಮಾಧುರಿಯು ಮನೆಯಿಂದ ತಾನಾಗಿಯೇ ಹೋದಳಲ್ಲವೇ?"

ಸಾವಂತ—"ಅಹುದು."

ಬ್ಯಾರಿಸ್ಟರನು ತನ್ನ ಸವಾಲನ್ನು ಮುಗಿಸಿದನು.

ಸರಕಾರಿ ವಕೀಲನು ಪ್ರತಿಸವಾಲಿನಲ್ಲಿ ಸಾವಂತನಿಗೆ ಹೀಗೆ ಕೇಳಿದನು. "ಮಾಧುರಿಯು ಯಾವ ಪರಿಸ್ಥಿತಿಯಲ್ಲಿ ಮನೆಯಿಂದ ಹೋದಳು?"

ಸಾವಂತ—"ಆರೋಪಿಗಳು ಅವಳ ಕಡೆಗೆ ಪಿಸ್ತೂಲನ್ನು ಒಡ್ಡಿ ತಮ್ಮೊಡನೆ ಬರದಿದ್ದರೆ ಗುಂಡಿಕ್ಕುವೆವೆಂದು ಬೆದರಿಸಿದಾಗ ಅವಳು ಅಂಜಿ ಅವರನ್ನು ಹಿಂಬಾಲಿಸಿದಳು."

ಇಷ್ಟು ಸಾಕ್ಷಿಗಳಾದ ಮೇಲೆ ನ್ಯಾಯಾಧೀಶನು ಆರೋಪಿಗಳನ್ನು ಕುರಿತು, "ನಿಮ್ಮ ಮೇಲಿನ ಆರೋಪವು ಇಷ್ಟು ಜನ ಸಾಕ್ಷಿಗಳ ಮೇಲಿಂದ ಸಿದ್ಧವಾಗುವದು. ನೀವು ಈ ಕುಮಾರಿಯನ್ನು ಆಫ್ರಿಕಾದ ದರ್ಬಾನ ಪಟ್ಟಣಕ್ಕೆ ಎತ್ತಿಕೊಂಡು ರಿಜಿಸ್ಟ್ರಾರರ ಆಫೀಸಿಗೆ ಲಗ್ನವಾಗಲು ಕರೆದೊಯ್ದ ಬಗ್ಗೆ ಅಲ್ಲಿ ಇಸ್ಮಾಯಿಲ ಸೇಟರು ಕೊಟ್ಟ ಹೇಳಿಕೆ ಮತ್ತು ಈ ಕುಮಾರಿಯ ಹೇಳಿಕೆ ಹಾಗೂ ರಿಜಿಸ್ಟ್ರಾರನ, ಪೋಲೀಸರ ವರದಿಗಳಿಂದ ಸಿದ್ಧವಾಗುವದು. ನೀವು ನಿಮ್ಮ ಸಮರ್ಥನೆ ಮಾಡಿಕೊಳ್ಳಲು ಪುರಾವೆ ಕೊಡುವಿರಾ? ಎಂದು ಕೇಳಿದನು. ಆರೋಪಿಗಳು ಸೆರೆಯಲ್ಲಿದ್ದುದರಿಂದ ಮತ್ತು ಅವರು ದುಷ್ಟರಿದ್ದುದರಿಂದ ಅವರಿಗೆ ಯಾವ ಸಾಕ್ಷಿದಾರನೂ ದೊರೆಯುವಂತಿರಲಲ್ಲ. ಆದುದರಿಂದ ಅವರು ತಮ್ಮ ಪುರಾವೆ ಇಲ್ಲವೆಂದು ಹೇಳಿದರು.

ಆ ಮೇಲೆ ಸರಕಾರಿ ವಕೀಲನು ಫಿರ್ಯಾದಿ ತರ್ಫಿಯ ಎಲ್ಲ ಪುರಾವೆಯ ಸಾರಾಂಶವನ್ನು ವಿವರಿಸಿ ಆರೋಪಿಗಳು ನಿಸ್ಸಂದೇಹವಾಗಿ ಅಪರಾಧ ಮಾಡಿರುವರೆಂತಲೂ, ಅಪರಾಧವು ಅತಿ ಹೀನವಾದದ್ದೂ ಅಮಾನುಷವಾದದ್ದೂ ಇರುವದರಿಂದ ಅವರಿಗೆ ಮರಣದ ಶಾಸನವನ್ನು ವಿಧಿಸಬೇಕೆಂದೂ ಹೇಳಿ ತನ್ನ ವಾದವನ್ನು ಮುಕ್ತಾಯಗೊಳಿಸಿದನು. ಆ ಮೇಲೆ ನ್ಯಾಯಾಧೀಶರು ಬ್ಯಾರಿಸ್ಟರನಿಗೆ, ಆರೋಪಿಗಳ ಸಮರ್ಥನೆಗೆ ಏನು ಹೇಳುವದಿದೆ"? ಎಂದು ಕೇಳಿದನು.

ಬ್ಯಾರಿಸ್ಟರನು ಆರೋಪಿಗಳ ವತಿಯಿಂದ ಸಾಕ್ಷಿಗಳಿಲ್ಲದಿದ್ದರೂ ಕೆಲವು ಮಾತುಗಳನ್ನು ಯುಕ್ತಿಪೂರ್ವಕವಾಗಿ ಹೇಳಿದನು—

"ಮಾನ್ಯ ನ್ಯಾಯಮೂರ್ತಿಗಳೇ; ಈ ಆರೋಪಿಗಳೇ ಅಪರಾಧ ಮಾಡಿದವರೆಂಬದಕ್ಕೆ ಸ್ಪಷ್ಟವಾದ ಪುರಾವೆಯಿಲ್ಲ. ಸಾಕ್ಷಿದಾರರು ಫಿರ್ಯಾದಿಯ ಸೇವಕರು. ಫಿರ್ಯಾದಿಯ ಹಿತಸಂಬಂಧದಿಂದ ಅಪರಾಧವನ್ನು ಆರೋಪಿಗಳ ಮೇಲೆ ಹೊರಿಸುತ್ತಾರೆ. ಮಾಧುರಿಯನ್ನು ದರ್ಬಾನಕ್ಕೆ ಕರೆದೊಯ್ದರೆಂಬದಕ್ಕೆ ದರ್ಬಾನದ ರಿಜಿಸ್ಟ್ರಾರನ ಅಥವಾ ಅಲ್ಲಿಯ ಪೋಲೀಸರ ಸಾಕ್ಷಿಗಳೇ ಇಲ್ಲ. ಅವರ ಕೇವಲ ಲೇಖಿ ವರದಿ

ಗಳಿಂದ ಆ ಸಂಗತಿಯು ಕಾಯ್ದೆಯ ದೃಷ್ಟಿಯಿಂದ ಸಿದ್ಧವಾಗಲಾರದು. ಆದುದರಿಂದ ಈ ಅಪರಾಧವು ಆರೋಪಿಗಳಿಂದ ಮಾಡಿದ್ದು ಸಿದ್ಧವಾಗಿ ರುವದಿಲ್ಲ. ಇಂತಹ ಸ್ಥಿತಿಯಲ್ಲಿ ತಾವು ಸಂಶಯದ ಸವಲತ್ತನ್ನು ತೋರಿಸಿ ಅವರನ್ನು ಬಿಡುಗಡೆ ಮಾಡುವದು ವಿಹಿತವೆಂದು ನನ್ನ ಮತವು''.

ಈ ಪ್ರಕಾರವಾದ ವಿವಾದಗಳನ್ನು ಕೇಳಿಕೊಂಡ ಮೇಲೆ ನ್ಯಾಯಾಧೀಶನು ಹಲವು ಕ್ಷಣ ವಿಚಾರಮಾಡಿ ತನ್ನ ನಿರ್ಣಯವನ್ನು ಈ ರೀತಿ ಕೊಟ್ಟನು. ''೧ನೇ ಆರೋಪಿಯು ಮಾಧುರಿಗೆ ಮತ್ತು ಆವಳ ತಂದೆಗೆ ಬರೆದ ಪತ್ರಗಳಿಗೆ ಅವನ ಸಹಿ ಹಾಗು ಆತನ ವಿಳಾಸದ ಮುದ್ರಿತ ಅಕ್ಷರ ಗಳಿದ್ದು ಅವುಗಳು ತನ್ನವಲ್ಲವೆಂಬದನ್ನು ಸಿದ್ಧಮಾಡಲಿಲ್ಲ. ೧-೨ನೆಯ ಆರೋಪಿಗಳು ದರ್ಬಾನದಲ್ಲಿ ಕೈದುಮಾಡಲ್ಪಟ್ಟಿದ್ದಾರೆ. ದರ್ಬಾನದ ಪೋಲೀಸರ ವರದಿಯ ಮೇರೆಗೆ ಮುಂಬಯಿಯ ಪೋಲೀಸರು ಅವರನ್ನು ಇಲ್ಲಿಗೆ ತಂದಿದ್ದಾರೆ. ೩-೪ನೆಯ ಆರೋಪಿಗಳು ಅಪರಾಧಿಗಲ್ಲದಿದ್ದರೆ ತಲೆತಪ್ಪಿಸಿಕೊಂಡು ಹೋಗುತ್ತಿರಲಿಲ್ಲ. ಇದೂ ಅಲ್ಲದೆ ೧ನೇ ಆರೋಪಿಯು ಮಾಧುರಿಯನ್ನು ಒಲಿಸಲು ಅವಳ ಕೋಣೆಯಲ್ಲಿಡಲು ಕಳುಹಿದ ಅವನ ಚಿತ್ರವು ಸಹ ವಿಠ್ಠಲದಾಸರ ಮನೆಯಲ್ಲಿ ಪೋಲೀಸರು ಪಂಚ ನಾಮೆ ಮಾಡುವಾಗ ದೊರೆತದ್ದು ಹಾಜರ ಆಗಿದೆ. ಇವೆಲ್ಲ ಕಾರಣಗಳ ಮೂಲಕ ಆರೋಪಿಗಳು ಈ ಅಪರಾಧ ಮಾಡಿರುವದು ಸಿದ್ಧವಾಗುವದ ರಿಂದ ೧-೨-೪ನೆಯ ಆರೋಪಿಗಳಿಗೆ ಮರಣಾಂತ ಶಿಕ್ಷೆಯನ್ನೂ ವಾಘನಿಗೆ (೩ನೆಯ ಆರೋಪಿ) ೧೨ ವರ್ಷದ ಸೆರೆಮನೆವಾಸದ ಶಿಕ್ಷೆಯನ್ನೂ ವಿಧಿಸಿದ್ದೇನೆ.'' ಹೀಗೆ ನಿರ್ಣಯ ಹೇಳಿ ನ್ಯಾಯಾಧೀಶನು ಪೀಠದಿಂದಿಳಿದು ಖಾಸ ಕೋಣೆಯಲ್ಲಿ ಸಿಬ್ಬಂದಿಯೊಡನೆ ಪ್ರವೇಶ ಮಾಡಿದನು.

ಆಗ ದರ್ಬಾರ ಮಹಲಿನಲ್ಲಿ ಭೀಕರ ಸ್ಥಿತಿಯುಂಟಾಯಿತು. ಆರೋಪಿಗಳ ಮುಖಗಳು ಕುಗ್ಗಿದವು. ಪೋಲೀಸರು ಅವರ ಕೈಗಳಿಗೆ ಕಬ್ಬಿಣದ ಸರಪಳಿಗಳನ್ನು ಬಿಗಿದು ಸೆರೆಮನೆಗೆ ಹೊರಟರು. ಮರುದಿನ ಜೇಲಿನ ಆವಾರದಲ್ಲಿ ಮೂವರ ಗಲ್ಲು ಸಂಭವಿಸುವದಿತ್ತು. ಪಟ್ಟಣದಲ್ಲಿ

ಎಲ್ಲಿ ನೋಡಿದರೂ ಜನರು ಆ ಸುದ್ದಿಯನ್ನೇ ಪ್ರಸ್ತಾಪಿಸುತ್ತಿದ್ದರು. ದುಷ್ಟತನ, ಹಿಂಸೆ, ಅಸತ್ಯ ವರ್ತನೆಗಳಿಗೆ ಜಯವು ದೊರೆಯಲಾರದೆಂಬ ಮಾತು ಎಲ್ಲರ ಬಾಯಿಂದ ಹೊರಡುತ್ತಿತ್ತು. ದುರಂಧರನು ದೊಡ್ಡ ಶ್ರೀಮಂತನಾದರೂ ವ್ಯಸನಜೀವಿಯಾಗಿ ಎಲ್ಲ ಆಸ್ತಿಯನ್ನು ಕಳೆದುಕೊಂಡವನಾಗಿದ್ದನು. ಆಸ್ತಿ ಹೋದರೇನಾಯಿತು! ಗುಣವಾದರೂ, ಯಶಸ್ಸಾದರೂ ಉಳಿಯಿತೇ? ಅವನ ದುಷ್ಟಕೃತಿಯ ಫಲವಾಗಿ ಅಕಾಲ ಮರಣವನ್ನನುಭವಿಸುವ ಗತಿಯು ಅವನಿಗುಂಟಾಯಿತು.

.... ಹೊಸ ಪುಸ್ತಕ ....

ಆಲ್ಫ್ರೆಡ್ ನಾರ್ಥ್ ವೈಟ್‌ಹೆಡ್ ಬರೆದ

## ಶಿಕ್ಷಣದ ಧ್ಯೇಯಗಳು

ಮತ್ತು ಇತರ ಪ್ರಬಂಧಗಳು

ಅನುವಾದಕರು:

ಕೆ. ಬಿ. ರಾಮಕೃಷ್ಣ ರಾವ್, ಬಿ. ಎ. (ಆನರ್ಸ್)

ಉ. ಲಕ್ಷ್ಮೀನಾರಾಯಣಾಚಾರ್ಯ ಎಂ. ಎ; ಎಲ್. ಟಿ.

ಬೆಲೆ: $\frac{2-4-0}{2 \cdot 25}$ ರೂ.

• •

## ಸ್ವಾತಂತ್ರ್ಯ ಮತ್ತು ಸಂಸ್ಕೃತಿ

ವಿಚಾರವಂತಗೆ ಇದು ಒಂದು ಔತಣ.

ಬರೆದವರು: ಜಾನ್ ಡ್ಯೂಯಿ

ಅನುವಾದಕ: ಕು. ಶಿ. ಹರಿದಾಸ ಭಟ್ಟ

ಪುಟಗಳು: ೮ + ೧೮೮. ಬೆಲೆ: ಎರಡು ರುಪಾಯಿ.

ಇಂದೇ ಬರೆಯಿರಿ:

ನವಯುಗ ಎಂಟರ್‌ಪ್ರೈಸ್, ಲಿಮಿಟೆಡ್

ನವಯುಗ ಪ್ರೆಸ್, ಉಡುಪಿ.

